## ಅರ್ಪಣೆ

ಮಾತೋಃಶ್ರೀಯವರಿಗೂ ;

ಪ್ರಿಯ ಅಣ್ಣಂದಿರಾದ

ವಿದ್ವಾನ್ **ಎಸ್. ಶೇಷಾದ್ರಿ,**

**ಎಸ್. ರಾಮಪ್ರಸಾದ್,** F. F. I. I.

**ಎಸ್. ಸುಂದರರಾಜನ್,** B Sc

ಅವರುಗಳಿಗೂ ಈ ಕೃತಿ ಅರ್ಪಿತ.

**—ರಂಗು**

# ಒಂದು ಪತ್ರ

ಜಯನಗರ

ಪ್ರಿಯ ಮಾವಿನಕೆರೆ, ೧೫-೧೨-೧೯೬೫

ನಿಮ್ಮ ಕಥಾಸಂಕಲನದ ಮುದ್ರಿತ ಹಾಳೆಗಳು ಕೈ ಸೇರಿವೆ. ಅಂತೂ ಯುವಕ ಮಾವಿನಕೆರೆ ರಂಗನಾಥರ ಸಣ್ಣ ಕತೆಗಳ ದೊಡ್ಡ ಸಂಗ್ರಹವೇ ಹೊರಬೀಳುತ್ತಿದೆ! ಸಂತೋಷ!

ಅಲ್ರೀ, ಕಥಾಸಂಗ್ರಹಕ್ಕೆ ಸಾಮಾನ್ಯವಾಗಿ ಪ್ರಥಮ ಕಥೆಯ ಹೆಸರನ್ನೋ ಕೊನೆಯದರ ಶಿರೋನಾಮೆಯನ್ನೋ ತಲೆಕಟ್ಟಾಗಿ ಇಡುತ್ತಾರೆ. 'ಅಂತಃಕರಣ' ಗಂಭೀರವೆನ್ನಿಸಿತೇನೋ. 'ನಾನಿನ್ನು ಬರೆಯಲಾರೆ........' ಅಮಂಗಳಕರ ಎಂದುಕೊಂಡಿರೇನೋ. ರುಕ್ಮಿಣಿ ಸೊಗಸಾದ ಹೆಸರೇ. ಅ. ನ. ಕೃ ಕಾದಂಬರಿಯೊಂದರ ಹಲವು ಸಹಸ್ರ ಪ್ರತಿಗಳು ಅದನ್ನು ಈಗಾಗಲೇ ಜನಪ್ರಿಯಗೊಳಿಸಿವೆ. ನನ್ನದು ಕಾದಂಬರಿಯಲ್ಲ,—ಕಥಾ ಸಂಕಲನ' ಎನ್ನಬಹುದು ನೀವು. ಆದರೂ........

ಟೀಕೆಯಿಂದಲೇ ಕಾಗದ ಆರಂಭಿಸಿದೆ ಎಂದುಕೊಂಡಿರಾ? ನನ್ನ ಸ್ನೇಹಕ್ಕೆ ತೆರಬೇಕಾಗುವ ಬೆಲೆ ಇದು!

ನೀವು ರಂಜಕ ಕತೆಗಳ ಕರ್ತೃ, ಹಿಂದಿನ ಸಂಪ್ರದಾಯದವರು—ಎನ್ನಲೆ? ಅಥವಾ, ಹೊಸ ರೀತಿಯಿಂದ ಬರೆಯುವ ಈ ಪೀಳಿಗೆಯವರ—ಎಂದು ಕರೆಯಲೆ? ನೀವು ಅದೂ ಅಲ್ಲ, ಇದೂ ಅಲ್ಲ. ಅಥವಾ, ಅದೂ ಹೌದು, ಇದೂ ಹೌದು.

ಹಳತಿನ ಒಳ್ಳೆತನ್ನು ಉಳಿಸಿಕೊಂಡು ಹೊಸತನ್ನು ಆವಿಷ್ಕರಿಸುವ ಬೆಳವಣಿಗೆಯ ಗುಣ ನಿಮ್ಮಲ್ಲಿದೆ. ದಯಪಿಟ್ಟು ಇದನ್ನು ಉಳಿಸಿಕೊಂಡು ಬನ್ನಿ. ಹೊಸ ಪ್ರಯೋಗಗಳನ್ನು ಮಾಡಿದರೆ ಮಾತ್ರ ಸಣ್ಣ ಕತೆ ಬಾಳುತ್ತದೆ. ಸಾಹಿತ್ಯಕ್ಕೆ ರಾಷ್ಟ್ರೀಯ ಗುಣಗಳಿದ್ದರೂ (ನೆಲದ ವಾಸನೆ) ರಾಸಾಯನಿಕ ಗೊಬ್ಬರ ನ್ಯಾವಾಗಲೂ ಅಂತರ ರಾಷ್ಟ್ರೀಯವೇ. ಲೋಕದ ಎಲ್ಲ ಸಾಹಿತ್ಯವೂ ನಮ್ಮದೇ.

ನಿತ್ಯನೂತನವಾದ ಲೈಂಗಿಕ ವಿಷಯಗಳಲ್ಲಿ ನಿಮಗೆ ಆಸಕ್ತಿ ಎನ್ನಬಹುದೆ? (ವಿಷಯಾಸಕ್ತರು ನೀವು!) ಇತರ ಬಗೆಯ ಕತೆಗಳನ್ನು ನೀವು ಬರೆದಿಲ್ಲ ಎಂದಲ್ಲ. ಇಲ್ಲಿ ಆರಿಸಿಕೊಂಡಿರುವ ಕತೆಗಳಲ್ಲಿ ಹೆಚ್ಚಿನವು ಅಂಥ ವಸ್ತುವನ್ನೇ ಒಳಗೊಂಡಿರುವುದರಿಂದ, ಕಾಮನ ಬಣ್ಣ ಇಲ್ಲಿ ಪ್ರಧಾನವಾಗಿದೆ. (ಕಾಮಾನೆ ಎನ್ನುತ್ತೀರಿ ನೀವು. ಯಾಕೊ?)

ಅವಿವಾಹಿತ ಕತೆಗಾರ ಇಷ್ಟನ್ನೆಲ್ಲ ಬರೆಯಬಲ್ಲನೆ ಎನಿಸುತ್ತದೆ ನಲ್ವತ್ತು ದಾಟಿರುವ ನನ್ನಂಥವರಿಗೆ. ನಿಮ್ಮ ವಯಸ್ಸಿನಲ್ಲಿ ನಾವೇನು ಬರೆದವೊ ನೆನಪಿಲ್ಲ! ಮರೆವು : ಲೋಕದ ಅಮೂಲ್ಯ ಸಂಪತ್ತುಗಳಲ್ಲೊಂದು.

ಸಮಾಧಾನದ ವಿಷಯವೆಂದರೆ ನಿಮ್ಮ ಶೃಂಗಾರ ಅಸಹ್ಯವೆನ್ನಿಸುವುದಿಲ್ಲ. ರಸಿಕರಿಗೆ ಅದು ಔತಣವಾಗುತ್ತದೆ. ರಸಿಕರಲ್ಲದವರನ್ನು ಮೈ ಮುಟ್ಟಿ ಎಚ್ಚರಿಸುತ್ತದೆ.

ಸೂಕ್ಷ್ಮಜೀವಿಗೂ ಅಳುಬುರುಕತನಕ್ಕೂ ಸ್ವಲ್ಪ ನಂಟು. ನನ್ನ ಅನುಭವ ಹೀಗೆ ಹೇಳುತ್ತದೆ: ಮೃದುವಾದ ಹೃದಯವನ್ನು ಯಾವಾಗಲೂ ಉಕ್ಕಿನ ಕವಚದೊಳಗೇ ಇಡಬೇಕು. ನಾನು ಬಲ್ಲೆ: ನಿಮ್ಮ ಅಂತಃಕರಣ ನಿರ್ಮಲವಾಗಿದೆ. ಆ ಕಾರಣದಿಂದಲೇ ಮಾನವೀಯ ನೆಲೆ ನಿಮ್ಮೆಲ್ಲಾ ಕೃತಿಗಳಲ್ಲೂ ಪ್ರಧಾನವೆನಿಸಿದೆ. ಬರಹಗಾರ ಮಾವಿನಕೆರೆಯ ಭವಿತವ್ಯದ ದೃಷ್ಟಿಯಿಂದ ಇದು ಮಹತ್ವದ್ದು.

ಸಾಯದಿದ್ದರೇನು ? 'ಅಂತಃಕರಣಕ್ಕೆ ನೇಣು ಬಿತ್ತು'ಎನ್ನುತ್ತೀರಿ. ಎಂತಹ ಹೃದಯಸ್ಪರ್ಶಿಯಾದ ಮಾತು !

ನಿಮ್ಮಲ್ಲಿ–ನಿಮ್ಮ ಬರೆವಣಿಗೆಯಲ್ಲಿ ನಾನು ಕಂಡು ಕೊಂಡಿರುವ ಇನ್ನೊಂದು ಮಹತ್ವ ಗುಣ ಆಗ್ರಹ ಮನೋಭಾವ. ಅನ್ಯಾಯವನ್ನು ಕಂಡು ಬಹಳವಾಗಿ ರೋಸುತ್ತೀರಿ. ಒಳ್ಳೆಯದೇ. ಮಾನವ ನಾಗರಿಕತೆ ಎರಡು ಸಾವಿರ ವರ್ಷ ಹಳೆಯದೋ, ಐದು ಸಾವಿರ ವರ್ಷಗಳ ಹಿಂದಿನದೋ ನನಗೆ ತಿಳಿಯದು. ಎಷ್ಟು ಸಹಸ್ರವಾದರೇನು ? ಮೃಗಾವಸ್ಥೆಯಿಂದ ಮನುಷ್ಯ ಬಹಳ ಮುಂದುವರಿದಿಲ್ಲ ಎಂದು ನನ್ನ ಖಚಿತ ಅಭಿಪ್ರಾಯ. (ನಿಮ್ಮ ಕತೆಗಳಲ್ಲಿ ಮೃಗ–ಮಾನವರ ಪಾತ್ರಗಳು ಬಹು ಸೊಗಸಾಗಿ ಬಂದಿವೆ,) ಹೀಗಿದ್ದರೂ ಬದುಕು ಈಗಿರುವುದಕ್ಕಿಂತ ಸ್ವಲ್ಪವಾದರೂ ಉತ್ತಮವಾಗಲಿ ಎಂದು ಆಶಿಸುವುದು ಸುಶಿಕ್ಷಿತರ ಲಕ್ಷಣ. ಅದಕ್ಕಾಗಿ ನಾವು ಮಾಡುವುದು ಏನಾದರೂ ಇದ್ದರೆ, ಹಿಂಜರಿಯಬಾರದು. ಪಾತ್ರಗಳ ವಿಶ್ಲೇಷಣೆಯಲ್ಲಿ ಈ 'ಆಗ್ರಹ' ಧರ್ಮವನ್ನು ನೀವು ತೋರಿದ್ದೀರಿ. ನಿಮ್ಮ ಕತೆಗಳಲ್ಲಿರುವ ಕಸುವಿಗೆ ಇದೂ ಕಾರಣ.

ಹೊಗಳುತ್ತಿದ್ದೇನೆ ಎಂದು ಉಬ್ಬಬೇಡಿ ! ಒಟ್ಟಿನಲ್ಲಿ ಹೇಳುವುದಾದರೆ, ಈ ಸಂಗ್ರಹದಲ್ಲಿರುವ ಕತೆಗಳನ್ನೋದಿ ನಾನು ಸಂತೋಷ ಪಟ್ಟಿದ್ದೇನೆ.

ಈ ಸಂಗ್ರಹದ, ಕೆಲವಂತೂ ಬಹಳಕಾಲ ನೆನಪಿನಲ್ಲಿ ಉಳಿಯು ವಂಥವು. ಈ ಬಗೆಯ ರಸಾನುಭವ ನಮ್ಮ ಓದಿಗರಿಗೂ ಆಗುತ್ತದೆಂಬ ಅಚಲ ನಂಬಿಕೆ ನನಗಿದೆ.

ಈ ಸಂಕಲನದಿಂದ ನೀವು ತೃಪ್ತರಾಗದೆ, ಇನ್ನಷ್ಟು ಬೆಲೆ ಬಾಳುವ ಕೃತಿಗಳನ್ನು ನೀವು ರಚಿಸುವಂತಾಗಲೆಂಬುದೇ ನನ್ನ ಹೃತ್ಪೂರ್ವಕ ಹಾರೈಕೆ.

ಇಂತು, ಒಲುವಿನ

—ನಿರಂಜನ

# ಸ್ಮರಣೆ

ಪತ್ರಿಕೆಗಳಲ್ಲಿ ಪ್ರಕಟವಾದ ಕತೆಗಳಲ್ಲಿ ಹಲವನ್ನು ಒಟ್ಟುಮಾಡಿ ಕೃತಿಯ ರೂಪದಲ್ಲಿ ವಾಚಕರ ಮುಂದಿಡುತ್ತಿರುವುದು ಇದೇ ಮೊದಲು. ಪತ್ರಿಕೆಯ ಸಂಪಾದಕರ ಹಾಗೂ ವಾಚಕರ ಅಭಿಮಾನ ಈ ಪ್ರಗತಿಗೆ ಕಾರಣವಾಗಿದೆ. ನನ್ನ ಕತೆಗಳನ್ನು ಆದರಿಸಿ ಪ್ರಕಟಿಸುತ್ತಾ ಬರುತ್ತಿರುವ .ಪ್ರಜಾಮತ; ಪ್ರಜಾವಾಣಿ; ಕೈಲಾಸ; ಪ್ರಪಂಚ; ಗೋಕುಲ; ಪ್ರಕಾಶ; ತಾಯಿನಾಡು; ಮಲ್ಲಿಗೆ; ಜನಪ್ರಗತಿ; ವಿಕ್ರಮ; ತರಂಗಿಣಿ; ಸಂಯುಕ್ತ ಕರ್ಣಾಟಕ ಮುಂತಾದ ಪತ್ರಿಕೆಗಳ ಸಂಪಾದಕರ ಉಪಕಾರಕ್ಕೆ ಬಹು ಕೃತಜ್ಞನಾಗಿದ್ದೇನೆ.

ನನ್ನ ಪ್ರಗತಿಗೆ ಬೆಂಬಲವಾಗಿರುವ, ಮಾನ್ಯರಾದ ತಿ. ತಾ. ಶರ್ಮ ನಿರಂಜನ ನಾಡಿಗೇರ ಕೃಷ್ಣರಾಯ, 'ಭಾರತಿ' ಹ. ವೆಂ. ನಾಗರಾಜರಾವ್, ಎಂ. ದ್ವಾರಕನಾಥರಾವ್, ಕೃಪಾ, ಸೂರ್ಯನಾರಾಯಣ ಚಡಗ, ಎಸ್ಸಾರ್ಕೆ, ಸು. ನಾ. ಮಲ್ಯ, ಕಾಟೀಲ್ ಗಣಪತಿ ಶರ್ಮ, ಕೆ. ಎಸ್. ಎನ್. ರಾವ್, ಪ್ರೊ|| ಎಂ. ವಿ. ಶ್ರೀನಿವಾಸ್. ಪ್ರೊ|| ಎ. ಕುಮಾರ ಸ್ವಾಮಿ ಅವರುಗಳ ಉಪಕಾರಕ್ಕೆ ಎಷ್ಟು ಋಣಿಯಾಗಿದ್ದರೂ ಸಾಲದು.

ನನ್ನ ಬರಹಗಳ ಬಗ್ಗೆ ಆಸಕ್ತಿ ವಹಿಸಿ, ಕೆಲವೊಮ್ಮೆ ಬೇಸರವಾಗುವ ಮಟ್ಟಿಗೆ ಕಿರುಕುಳ ಕೊಟ್ಟು ಬರೆಸುತ್ತಿರುವ ಮಿತ್ರರುಗಳಾದ ಸರ್ವಶ್ರೀ ಬಿ. ಜಿ. ಸತ್ಯಮೂರ್ತಿ, ವಿ. ಹರಿಕೃಷ್ಣ, ಜಿ. ಎಸ್. ನಾಗೇಶರಾವ್, ಅ. ಗಣಪಯ್ಯ ಅಲಸೆ, ಬಸವರಾಜ ಕೆಸ್ತೂರ್, ವಿಶುಕುಮಾರ್, ರಮಾ ತನಯ, ಡ್ವಾ. ಶ್ರೀ. ವೆಂಕಟೇಶ್, ಉದ್ಯಾವಾರ ಮಾಧವ ಆಚಾರ್ಯ, ಚಿ. ಸ. ರಾಜಶೇಖರ, ಹೆಚ್. ಜಿ. ಪಟ್ಟಾಭಿರಾಮನ್, ಲಕ್ಷ್ಮಣ ಅಳವಂಡಿ, ನಿ. ರಾ. ಸು, ಪ್ರಿಯತಮ, ಎಸ್. ರಂಗಸ್ವಾಮಿ ಅವರುಗಳನ್ನು ಇಲ್ಲಿ ಸ್ಮರಿಸುತ್ತೇನೆ.

ನಾನು ಬರೆದ ಲಿಪಿಯನ್ನು ಅರ್ಥಮಾಡಿಕೊಂಡು ಮುದ್ದಾಗಿ ಬರೆದು

ಕೊಡುತ್ತಿರುವ ಗೆಳತಿಯರಾದ ಎಸ್. ಎನ್. ತುಂಗಾ; ಎನ್. ರಾಧ; ಸುಧಾ, ಅವರುಗಳ ಉಪಕಾರವನ್ನು ಮರೆಯುವಂತಿಲ್ಲ.

ಅತ್ತಿಗೆ ಅಂಬು, ಡಾ|| ವಸುಮತಿ ಅವರ ಪ್ರೀತಿ ಸಹಕಾರಕ್ಕೂ ಋಣಿಯಾಗಿದ್ದೇನೆ.

ನನ್ನ ಅಭ್ಯುದಯ, ಭವಿಷ್ಯದ ಬಗ್ಗೆ ಬಹು ಚಿಂತೆವಹಿಸಿದ್ದ ತೀರ್ಥರೂಪು ಅವರು ಈ ಸಮಯದಲ್ಲಿ ಇಲ್ಲವಾಗಿದ್ದಾರೆ. ಅವರ ಆಶೀರ್ವಾದ ಮುಂದೂ ನನ್ನ ಜೀವನದ ದೀಪ್ತಿಯಾಗಿ ಮಾರ್ಗ ತೋರಿಸಲೆಂದು ಅನನ್ಯವಾಗಿ ದೇವರಲ್ಲಿ ಪ್ರಾರ್ಥಿಸುತ್ತೇನೆ.

ಈ ಸಂಕಲನವನ್ನು ಪ್ರಕಟಿಸಲು ಬಹು ಆಸಕ್ತಿ ವಹಿಸಿ ಮುಂದಾದ ಹೇಮಂತ ಸಾಹಿತ್ಯದ ಒಡೆಯರಾದ ಗೆಳೆಯ ಶ್ರೀ. ಎಂ. ವೆಂಕಟೇಶ್ ಅವರಿಗೂ, ತೊಂದರೆಗಳನ್ನೆಲ್ಲ ಸಹಿಸಿಕೊಂಡು ಕೃತಿ ಸಿದ್ಧ ಮಾಡಲು ಸಹಕರಿಸಿದ ಶ್ರೀ. ಎಲ್. ಪಿ. ಮಹದೇವ್ ಅವರಿಗೂ, ಕಲಾ ಕೃತಿ ರಚಿಸಿಕೊಟ್ಟ ಗೆಳೆಯ ಜಿ. ಕೆ. ಸತ್ಯರಿಗೂ ವಂದನೆಗಳು.

ಕೃತಿ ಓದಿ ಮುಗಿಸಿದ ಮೇಲೆ, ಅದರ ಬಗ್ಗೆ ತಮಗೆ ಏನು ಅನ್ನಿಸುತ್ತದೆ ಎಂದು ಮಾನ್ಯ ವಾಚಕರು ಎರಡು ಪಂಕ್ತಿ ಬರೆದು ತಿಳಿಸಿದಲ್ಲಿ ಉಪಕೃತನಾಗುತ್ತೇನೆ.

ಪುರೋಗಾಮಿ ಸಾಹಿತ್ಯ ಸಂಘ,
ಮಲ್ಲೇಶ್ವರಂ, ಬೆಂಗಳೂರು-3

—ಮಾವಿನಕೆರೆ ರಂಗನಾಥನ್

# ಅಂತಃಕರಣ

"ಈಗ ರೈಲಿನ ಚಕ್ರ ನನ್ನ ಮೇಲೆ ವೇಗದಲ್ಲಿ ಬಂದು ಹಾದುಹೋಗುತ್ತದೆ. ಆಗ ಕಚಕ್ ಎಂದು ನನ್ನ ತಲೆ, ಕೈಕಾಲು ಉದರ ಎಲ್ಲಾ ಬೇರೆ ಬೇರೆ ಆಗುತ್ತದೆ. ರಕ್ತದ ಮಡುವಿನಲ್ಲಿ ಗುರುತು ಸಿಗದಂತೆ ನನ್ನ ಹೆಣ ಬೀಳುತ್ತದೆ. ಆಗ ನನ್ನ ಅಂತಃ ಕರಣಕ್ಕೆ ಬಿದ್ದ ನೇಣಿನ ಸುದ್ದಿ ಯಾರಿಗೂ ಅರಿವಾಗುವುದಿಲ್ಲ"........

೧

ಇನ್ನು ಮುಂದಾದರೂ ಅನುಸರಿಸಿಕೊಂಡು ನಡೆಯಬೇಕು. ಹಿಂದೆ ಬದುಕಿದಷ್ಟು ದಿನ ಮುಂದೆ ಬದುಕಲಾರೆ. ಇಲ್ಲದ ಲಡಾಯಿಏಕೆ? ಅವಳ ಸ್ವಭಾವವೇ ಹಾಗೆ. ಏನೋ ಪಿರಿಪಿರಿ; ಏನೋ ನಸನಸೆ. ಒಬ್ಬರ ಸ್ವಭಾವ ಅರಿಯಲು ಪ್ರಯತ್ನಿಸುವುದೇ ಇಲ್ಲ. ಮನಸ್ಸಿಗೆ ತೋಚಿದ ಹಾಗೆಯೇ ಆಡಿಬಿಡುತ್ತಾಳೆ ಅದು ನನಗೆ ಸಹಿಸುವುದಿಲ್ಲ. ಮೂಗಿನ ತುದಿಯಲ್ಲಿಯೇ ಸಿಟ್ಟು. ಹುಚ್ಚಾಪಟ್ಟೆ ಎಗರಾಡಿಬಿಡುತ್ತೇನೆ.

ಹೋಗಲಿ ಸಿಟ್ಟು ಬಂದಿದೆ, ಸ್ವಲ್ಪಹೊತ್ತು ಎಗರಾಡಿಕೊಳ್ಳಲಿ ಎಂದು ಅವಳು ಸುಮ್ಮನೆ ಇರುವವಳಲ್ಲ. ಏಕಿ ಅಂದರೆ ಪ್ರೇತಿ ಅನುತ್ತಾಳೆ. ಸರಿ, ಬೆಳಗಾದರೆ ಲಡಾಯಿ, ರಂಪ ತಪ್ಪಿದ್ದಲ್ಲ.

ತೀರ್ಮಾನಿಸಿಬಿಟ್ಟಿದ್ದೇನೆ; ಮುಂದಾದರೂ ಸರಿಯಾಗಿರಬೇಕೆಂದು. ಬುದ್ಧಿ ತಿಳಿಯದ ಪ್ರಾಣಿ ಆಡುತ್ತಾಳೆ ಎಂದರೆ ನಾನೂ ಆ ರೀತಿ ಆಡುವುದೆ? ಸರಿಯಿಲ್ಲ. 'ಥಣ್ !'

ಈಗ ಐದುವರೆ. ಹೊರಗೆ ಹೋಗ ಬಹುದು. ಈಗ ಯಾರೂ ಪ್ರಶ್ನಿಸುವುದಿಲ್ಲ. ಅರ್ಧ ತಾಸು ಮೊದಲೇ ಫೈಲನ್ನೆಲ್ಲಾ ಸಂದೂಕಕ್ಕೆ ಸೇರಿಸಿ ಗಡಿಯಾರದತ್ತ ನೋಡುತ್ತಿರುತ್ತೇನೆ. ಕೆಲಸ ಸಾಗಲಿ ಬಿಡಲಿ, ಐದೂವರೆಯವರೆಗೆ ಕೂತೇ ಇರಬೇಕು.

ಕುರ್ಚಿಯ ಬೆನ್ನಿಗೆ ನೇತುಹಾಕಿದ್ದ ಕೋಟನ್ನು ತೆಗೆದು ಭುಜಕ್ಕೆ ಸಿಕ್ಕಿಸಿಕೊಂಡೆ. ಜೀವಶ್ರವವಾಗಿದೆ. ಸಾಲದ್ದಕ್ಕೆ ಇದುಬೇರೆ. ಹನ್ನೆರಡು ವರುಷಗಳ ಹಿಂದಿನದು. ಮದುವೆಯಲ್ಲಿ ಮಾವ ಹೊಲಿಸಿಕೊಟ್ಟಿದ್ದು. ಮಾಸಿ ಹೋದೀತು. ಬಣ್ಣ ಹೋದೀತು; ಎಂದು ಸ್ವಲ್ಪ ವರುಷ ನೀರಿಗೆ

ಹಾಕಿರಲಿಲ್ಲ. ಇತ್ತೀಚೆಗೆ ಒಗೆದರೆ ಹರಿದೀತು ಎಂಬ ಭಯದಿಂದ ಒಗೆದಿಲ್ಲ. ಹಾಗೆಯೇ ತೊಡುತ್ತೇನೆ.

ಹೊರಗೆ ಬಂದೆ. ಎಲ್ಲರೂ ಅವಸರದಲ್ಲಿದ್ದಾರೆ. ಅವಾಂತರ, ಟ್ರಾಮ್ ರೈಲಿಗೆ ಕ್ಯೂ ಜಾಸ್ತಿ. ಓಡುತ್ತಿದ್ದಾರೆ. ನನಗೆ ಅದರ ತರಾತುರಿಯಿಲ್ಲ. ನನ್ನ ಸ್ಥಳ ಕಾದಿರಿಸಲಾಗಿದೆ ಯಾರೂ ಆಕ್ರಮಿಸುವಂತಿಲ್ಲ, ನಡೆಯುತ್ತೇನೆ. ನಡವೇ ನಡೆಯುತ್ತೇನೆ. ರಸ್ತೆಯನ್ನು ಕಾಲಿನಲ್ಲಿ ಅಳೆದು, ಅಳೆದು ಸುರಿಯುತ್ತೇನೆ.

ಎಲ್ಲೋ ಸಂಕಟವಾಗುತ್ತಿದೆ. ಎಲ್ಲೋ ? ಇಲ್ಲಿ ಹೊಟ್ಟೆಯಲ್ಲಿ. ಅಸಾಧ್ಯ ತಳಮಳ. ಮಧ್ಯಾನ ಮೂರರ ಸಮಯವಿರಬೇಕು ಟೋಕನ್ ರಸೀತಿ ಕಳೆದುಹೋಗಿದೆ ಎಂದು ಸೈಕಲ್ ಶಾಪ್ ರಹಮತುಲ್ಲಾ ಬಂದಿದ್ದ. ಅವನಿಗೆ, ಕೌಂಟರ್ ಟೋಕನ್, ರಸೀತಿ ಕೊಟ್ಟಿದ್ದಕ್ಕೆ ಒಂದು ಬಿಕೋರಿ, ಅರ್ಧ ಕಪ್ಪು ಚಾಯ್ ಹಾಕಿಸಿದ್ದ. ಇವತ್ತೆ ವಾಸಿ ಸ್ವಲ್ಪ ಗಿಟ್ಟಿದೆ. ಕೆಲವು ದಿನ ಇದೂ ಇರುವುದಿಲ್ಲ. ತಿಂದ ದಿನವೂ ಅಷ್ಟೆ, ತಿನ್ನದ ದಿನವೂ ಅಷ್ಟೆ. ಹೊಟ್ಟೆ ಚುರುಗುಟ್ಟುತ್ತಲೇ ಇರುತ್ತದೆ. ಇವತ್ತಿನದೇನು ? ಹದಿನೈದು ವರುಷಗಳ ಅಭ್ಯಾಸ.

ಶರಾಯಿ ಅಳಕವಾಗಿ ಸೊಂಟದಲ್ಲಿ ಕೂರದೆ ಕೆಳಗೆ ಜಾರತೊಡಗಿ ಕಾಲಿಗೆ ತೊಡರುವಂತಾಗಿದೆ. ನಿಂತು ನಾಲ್ಕು ಮಡಿಕೆ ಮಡಿಸಿದೆ, ಮುಂದಿನ ಸಾರಿಯಾದರೂ ಒಗೆದಾಗ ಸರಿಮಾಡಬೇಕು. ಆದಿತ್ಯವಾರ ಒಗೆದುಹಾಕುತ್ತೇನೆ. ರಿಪೇರಿ ಮಾಡಿಸಬೇಕು ಅನ್ನುವುದರಲ್ಲಿ ಸೋಮವಾರ ತೊಟ್ಟು ಬರುವುದು. ರಿಪೇರಿ ಮಾಡಿಸಬೇಕು ಅನ್ನುವುದರಲ್ಲಿಯೇ ಕಾಲ ಬಳ ಸೀಳ ಹೋಗಿಬಿಟ್ಟಿದೆ.

ನಡೆಯತೊಡಗಿದ್ದೇನೆ; ಏಕಪ್ರಕಾರವಾಗಿ ನಡೆಯುತ್ತಲೇ ಇರುವುದು. 'ಎಕ್ಸ್‌ಪ್ರೆಸ್' ಇದ್ದಹಾಗೆ. ನಿಲ್ದಾಣ ಸಿಗುವವರೆಗೂ ನಿಲ್ಲುವುದೇ ಇಲ್ಲ. ಕಾಲುಗಳು ಸಾಗುತ್ತಲೇ ಇರುತ್ತವೆ.

ಅವನೇಕೆ ಆ ರೀತಿ ಗದರಿಕೊಂಡ ಅನ್ನುತ್ತೀನಿ ? ಅವನಿಗೆ ರೊಕ್ಕ ಕೊಡಬೇಕಾದದ್ದು ನಿಜ. ಸಂಬಳ ಬಂದಕೂಡಲೇ ಕೊಡ್ತೇನೆ ಅಂದದ್ದು ನಿಜ. ಕೊಡಬೇಕು ಅಂತಲೇ ಇದ್ದೆ. ಆದರೆ, ರೊಕ್ಕ ಬಂದಕೂಡಲೇ ಹರಿದು ಹಂಚಿ ಹೋಯಿತು. ಪಾಪ ಅವನು ತಾನೆ ಏನು ಮಾಡ್ತಾನೆ ?

ಪಹರು! ಮಾತನಾಡಿದ್ದಕ್ಕೆಲ್ಲ ರೊಕ್ಕ ಎಣಿಸಬೇಕು. ಅಂತಹದರಲ್ಲಿ ಕೊಟ್ಟಿದ್ದನ್ನು ಕೇಳಬೇಡ ಅಂದರೆ ಆಗುತ್ತೇನು? ಹೇಗಾದರೂ ಮಾಡಿ ಪಠಾಣನ ಕಣ್ಣು ತಪ್ಪಿಸಿ ಮುಂದಿನ ಸಂಬಳದಲ್ಲಿ ಕೊಟ್ಟುಬಿಡಬೇಕು.

ಈ ಪಠಾಣನ ಕೈಗೆ ಯಾವಾಗ ಹೇಗೆ ಸಿಕ್ಕಿಕೊಂಡೆ ಎನ್ನುವ ನೆನಪಿಲ್ಲ. ಬಹುದಿನದ ನಂಟು, ಅಂಟು. ಬಿಡಿಸಿಕೊಳ್ಳಲು ಈ ಜನ್ಮದಲ್ಲಿ ಸಾಧ್ಯವಿಲ್ಲ. ಯಾವ ಜನ್ಮದ ಋಣವೋ ಬಡ್ಡಿ ಕೊಟ್ಟು ತೀರಿಸುತ್ತಿದ್ದೇನೆ. ಸಂಬಳದ ದಿನ ಬಾಗಿಲಲ್ಲಿ ಮೀಸೆ ಹುರಿ ಮಾಡುತ್ತಾ ಕಾದಿರುತ್ತಾನೆ. ದುಡ್ಡು ಕೊಟ್ಟ ಮೇಲೆ ಮುಂದೆ ಹೆಜ್ಜೆ ಇಡಲು ಜಾಗ.

'ಅಯ್ಯಪ್ಪ ತತ್ತರಿಸಿದೆ!'

ಯಾರೋ ಟ್ರಾಂ ಹಿಡಿಯುವ ಗಡಿಬಿಡಿಯಲ್ಲಿ ನೂಕಿಕೊಂಡು ಓಡಿದ್ದರು. ನಿಂತುಕೊಂಡೆ ಸುಧಾರಿಸಿಕೊಳ್ಳಬೇಕು. ಮುಂಡೇಗಂಡರು ಈ ಪಾಟಿಯ ಜನ ಎಲ್ಲಿಂದ ಬಂದರು ಅಂತ ಯೋಚಿಸುತ್ತೇನೆ. ಹುಳು ಹರಿದು ಹೋದ ಹಾಗೆ ಹೋಗ್ತಾ ಇದ್ದಾರೆ. ಬಹು ಹೊತ್ತು ನಿಲ್ಲುವಂತಿಲ್ಲ. ಹಿಂದಿನಿಂದ ತಳ್ಳಿಕೊಂಡು ಬಂದು ಬಿಡುತ್ತಾರೆ. ಸಾಗಿದೆ.

ನಾಳೆ ದೊಡ್ಡ ಸಾಹೇಬರು ಬರುತ್ತಾರೆ. ಅಡ್ಡಬಿದ್ದು ಕೇಳಿಕೊಳ್ಳಬೇಕು ಬಡ್ತಿ ಕೊಡಲು. ನನಗಿಂತ ಆರು ವರ್ಷ ತಡವಾಗಿ ಸೇರಿದ ಕ್ರಿಷನ್, ಈಗ ಚೆಕಿಂಗ್ ಸೀನಿಯರ್. ಚಿಕ್ಕಸಾಹೇಬರು ಅವನ ಕೆಲಸದಿಂದ ಮೆಚ್ಚಿಕೊಂಡು ಬಡ್ತಿ ಕೊಡಿಸಿದ್ದಾರಂತೆ. ಕ್ರಿಷನ್ ಚಿಕ್ಕಮ್ಮ ಬಸುರಿ, ಪಾಪ. ಕಿಷನ್ ಹಾಜರಿ ತಪ್ಪಿಸಿದರೂ ಚಿಕ್ಕ ಸಾಹೇಬರು ಕೇಳುವುದಿಲ್ಲ.

ಬಡ್ತಿ ಕೇಳಲು ಹೋದಂದು ಚಿಕ್ಕ ಸಾಹೇಬರು ಗದರಿಕೊಂಡದ್ದು ನೆನಪಿದೆ.

ನಾನು ತಡವಾಗಿ ಬರುತ್ತೇನೆ, ವೇಳೆಗೆ ಮುಂಚಿತವಾಗಿಯೇ ಹೋಗಿಬಿಡುತ್ತೇನೆ ಎಂದು ರೇಗಾಡುತ್ತಾರೆ. ಮೈಗಳ್ಳ ಸೋಮಾರಿ, ಕೆಲಸವೇ ಸಾಗುವುದಿಲ್ಲ ಎನ್ನುತ್ತಾರೆ. ನಾನು ಏನು ಮಾಡುತ್ತಿದ್ದೀನಿ, ಎಂದು ನೋಡಲು ಆಗಾಗ್ಗೆ ಸರ್‌ಪ್ರೈಸ್ ವಿಸಿಟ್ ಕೊಡುತ್ತಾರೆ.

ತಡವಾಗಿ ಬರಬೇಕೆಂದು ನಾನು ಎಂದೂ ಪ್ರಯತ್ನಿಸಿದ್ದಿಲ್ಲ. ನಡೆದು ಬರುವುದರಲ್ಲಿ ಹೊತ್ತಾಗಿಬಿಡುತ್ತದೆ. ಅವಾಂತರದಲ್ಲಿ ಸುಸ್ತಾಗಿ ಬಂದಿರು

ತ್ತೇನೆ. ಸುಧಾರಿಸಿಕೊಳ್ಳುವುದರಲ್ಲಿ ಮಧ್ಯಾಹ್ನವಾಗಿಬಿಡುತ್ತದೆ. ಆಯಾಸ ದಿಂದ ಕಣ್ಣು ಕಿರಿಯದಾಗತೊಡಗುತ್ತದೆ. ಅಷ್ಟರಲ್ಲಿ ಚಿಕ್ಕ ಸಾಹೇ ಬರ ಸರ್‌ಪ್ರೈಸ್ ವಿಸಿಟ್. ಬಂದು ಅಸಾಧ್ಯವಾಗಿ ರೇಗಾಡುತ್ತಾ ಹೋಗು ತ್ತಾರೆ. ಮುಂದಿನ ಕೋಣೆಯಲ್ಲಿ ಕಿಷನ್ ಟೇಬಲಿನ ಮೇಲೆ ಮುಖವಿಟ್ಟು ಹಾಯಾಗಿಮಲಗಿರುತ್ತಾನೆ. ಅತ್ತ ಹೋಗುವುದಿರಲಿ, ನೋಡುವುದೂ ಕೂಡಾ ಇಲ್ಲ.

ಈ ಸಾರಿಯು ದೀಪಾವಳಿಅಡ್ವಾನ್ಸ್ ರೊಕ್ಕ ತೆಗೆದು ಅವಳಿಗೊಂದು ಸೀರೆ ತೆಗೆಯಬೇಕು. ಬಣ್ಣವೆಲ್ಲಾ ಹೋಗಿ ಅಂಚು ಹರಿದಿದೆ ಎಂದು ಹೇಳು ತ್ತಲೇ ಬಂದಿದ್ದಾಳೆ. ಒಂದು ಸೀರೆ, ಕುಪ್ಪಸದ ಬಟ್ಟೆ ತೆಗೆದುಕೊಟ್ಟರೆ ಮುಂದಿನ ದೀಪಾವಳಿಯವರೆಗೂ ಸತಾಯಿಸಬಹುದು.

ಮನೆಯ ಮಾಲೀಕ ಬಾಡಿಗೆಗೆ ತಗಾದೆ ಮಾಡಿದನಂತೆ. ಮುಂಜಾನೆ ಬರುವುದಾಗಿ ಹೇಳಿದ್ದನಂತೆ. ಅವಳು ಮಣಿ ಪೋಣಿಸಿದಂತೆ ಯಾವ ಮಾತನ್ನೂ ಬಿಡದೆ ವರದಿಮಾಡುತ್ತಾಳೆ. ಅವಳ ಜ್ಞಾಪಕ ಶಕ್ತಿಗೆ ತಾರೀಫ್ ಮಾಡಬೇಕು. ಯಾವ ಸಂಕೋಚವೂ ಇಲ್ಲದೆ ಮನೆಯ ಮಾಲೀಕ ಉಪ ಯೋಗಿಸಿದ ಬೈಗಳನ್ನೇ ಉಪಯೋಗಿಸಿ ವರದಿ ಮಾಡುತ್ತಾಳೆ. ಫಟೀಲ್ ಎಂದು ಕೆನ್ನೆಗೆರಡು ಬಿಗಿಯಬೇಕೆನಿಸುತ್ತದೆ. ಏನು ಮಾಡುವುದು ? ವರದಿ ಒಪ್ಪಿಸುತಿದ್ದಾಳೆ. ಬರುತ್ತೇನೆ ಎಂದ ಮೇಲೆ, ನಮ್ಮ ಮನೆಯ ಮಾಲೀಕ ತಪ್ಪುವುದಿಲ್ಲ. ಬಂದುಬಿಡುತ್ತಾನೆ. ಅವನ ಕೈಗೆ ಸಿಕ್ಕಿಕೊಂಡರೆ ಇಲ್ಲದ ಪಂಚಾಯಿತಿ, ರಾಮಾಯಣ ಮಾಡಿಬಿಡುತ್ತಾನೆ, ಅವನು ಬರುವ ಮುನ್ನವೇ ಮನೆಬಿಟ್ಟೆ. ರಾತ್ರಿ ನಾನು ಮನೆಗೆ ಬಂದೇ ಇರಲಿಲ್ಲ ಎಂದು ಹೇಳಿಬಿಡು ಎಂದು ಹೇಳಿಕೊಟ್ಟಿದ್ದೆ. ಅಬಬ್ಬ ಎಂದರೆ ಹನ್ನೊಂದು ತಿಂಗಳ ಬಾಡಿಗೆ ರೊಕ್ಕ ಕೊಡಬೇಕು, ಅಷ್ಟೆ. ಹದಿನೈದು ವರ್ಷಗಳಿಂದ ತೆರುತ್ತಿರುವ ನನಗೆ ಜವಾಬ್ದಾರಿ ಗೊತ್ತಿಲ್ಲವೇ ?

ಅವಳೊಬ್ಬಳೇ ದಿನ ಹೇಗೆ ದೂಡುತ್ತಾಳೊ ? ಒಮ್ಮೊಮ್ಮೆ ನೀರು ಮೇಲಕ್ಕೆ ಹತ್ತುವುದಿಲ್ಲ. ಒಮ್ಮೊಮ್ಮೆ ಏನು ತಿಂಗಳಿಗೆ ಇಪ್ಪತ್ತು ದಿನ ಮೂರನೆಯ ಪ್ಲಾಟಿಗೆ ನೀರು ಏರುವುದೇ ಇಲ್ಲ. ಎರಡನೆಯ ಪ್ಲಾಟಿಗೆ ಇಳಿದು ತರಬೇಕು, ತರುತ್ತಾಳೆ. ಪಾಪ. ತಾಯಿಯಾಗುವ ಬಯಕೆ

ಯಾಗಿರಬೇಕು. ಮದುವೆಯಾಗಿ ನಾಲ್ಕು ವರ್ಷಗಳಾದರೂ ಮಗುವಾಗಿಲ್ಲ. ವೈದ್ಯರಲ್ಲಿ ಕರಕೊಂಡು ಹೋಗಿ ಅವಳನ್ನು ತಪಾಸಣೆಗೆ ಒಪ್ಪಿಸಿದೆ. ಅವಳನ್ನು ಪರೀಕ್ಷಿಸಿದ ವೈದ್ಯರೆಂದರು, ಅವಳಿಗೇನೂ ಆಗಲಿಲ್ಲ ಎಂದು. ಹಾಗಾದರೆ ? ನನ್ನನ್ನು ಪರೀಕ್ಷಿಸಿದ ವೈದ್ಯರು ಚಿಟಿಕೆ ಹಾರಿಸಿ ಸುಮ್ಮನಾಗಿ ಬಿಟ್ಟರು. ಅಪ್ಪನಾಗುವ ಆಸೆ ಕೈಗೂಡದು ಎಂದು ಅರಿತೆ.

ಅದನ್ನು ಅವಳಿಗೆ ಹೇಳಿ ಏಕೆ ಮನನೋಯಿಸಲಿ ಎಂದು ಸಂಗತಿ ಮುಚ್ಚಿಟ್ಟು ಹೇಳಿದೆ, ತಡವಾಗಿ ಆಗುತ್ತದೆ ಎಂದು. ನೊಂದುಕೊಂಡಾಳು ಎಂದು ರಮಿಸಲು ಪ್ರಾರಂಭಿಸಿದೆ. ಕೂತಿದ್ದರೆ ಮುಂಗುರುಳಾಡಿಸುತ್ತಿದೆ ಮೃದುವಾಗಿ ಕೆನ್ನೆ ಸವರುತ್ತಿದೆ. ಪ್ರೇಮದಿಂದ ಹೆಗಲಮೇಲೆ ಕೈಹಾಕಿ, ಸೊಂಟದವರೆಗೂ ಜಾರಿಸುತ್ತಿದೆ. ಕೆಲವೊಮ್ಮೆ ಅವಳ ಎದೆಯಲ್ಲಿ ಮಗುವಿನಂತೆ ಮುಖ ಹುದುಗಿಸಿಕೊಳ್ಳುತ್ತಿದೆ. ಏನೋ ಹಿತ ಏನೋ ತೃಪ್ತಿ.

ಪ್ರತಿದಿನವೂ ಹೀಗೆ ಮಾಡಲು ಆಗಲಾರದು. ದಿನದ ದಣಿವು ಅಸಾಧ್ಯ. ನನ್ನ ಈ ಪ್ರಯತ್ನವೆಲಾ ನಾಟಕವೆಂಬ ಕೊರಗು. ಇದರಿಂದಾಗಿ ದೂರ ದೂರ ಸರಿಯ ತೊಡಗಿದ್ದೇವೆ, ಎಂಬ ಭಾವನೆ. ನನ್ನ ಪ್ರಯತ್ನ ಗಾಳಿಯನ್ನು ಗುದ್ದಿ ಮೈನೋಯಿಸಿಕೊಂಡಂತೆ ಎಂದುಕೊಳ್ಳುತ್ತೇನೆ.

ಅವಳ ಮನದಲ್ಲಿ ಏನು ಬಯಕೆ ಇದೆಯೋ ಅರಿಯೆ. ಬಾಯಿಬಿಟ್ಟು ಏನೂ ಹೇಳಳು. ಹೇಳುವುದಾದರೂ ಏನೆಂದು ? ಅತೃಪ್ತಿಗೊಂಡಿದ್ದಾಳೆ ಎಂಬಷ್ಟು ಮಾತ್ರ ಬಲ್ಲೆ. ನಾನು ಮನೆಗೆ ಬರುವುದು ಅವಳಿಗೆ ಗಮನದಲ್ಲಿರುವುದಿಲ್ಲ. ಹೋಗುವುದೂ ಗಮನಿಸುವುದಿಲ್ಲ. ಮನೆಗೆ ಬಂದದ್ದನ್ನು ಕಂಡಾಗ ಯಾವಾಗಲಾದರೊಮ್ಮೆ ತಾಟಿನಲ್ಲಿ ಬೆಳಗ್ಗಿನ ಅನ್ನಹಾಕಿ, ಮಜ್ಜಿಗೆ ಬಿಟ್ಟು ಇತ್ತ ಬಂದುಬಿಡುತ್ತಾಳೆ. ಒಮ್ಮೆಯೇ ಅನ್ನ ಮಾಡುವುದು ; ಅದನ್ನು ಎರಡುಹೊತ್ತಿಗೂ ಹವಣಿಸಿಕೊಳ್ಳಬೇಕು. ಮೌನವಾಗಿ ಊಟ ಮಾಡುತ್ತೇನೆ. ಇಲ್ಲ, ಕೆಲವೊಮ್ಮೆ ಸುರೊ ಎಂದು ಶಬ್ದ ಕೂಡ ಆಗುತ್ತದೆ. ಮಜ್ಜಿಗೆಯ ಅಂಶಕ್ಕಿಂತ ನೀರು ಜಾಸ್ತಿಯಾದಾಗ.

ಇವಳು ಬೇಸರಿಸಬಾರದು. ಹೇಗಾದರೂ ಮಾಡಿ ಇವಳನ್ನು ಸುಖಪಡಿಸಬೇಕು ಎಂದು ವಿಶ್ವಪ್ರಯತ್ನ ಮಾಡುತ್ತೇನೆ. ಪಠಾಣನಿಗೆ, ಬಾಡಿಗೆಗೆ ಕೊಟ್ಟು ಮಿಕ್ಕ ರೊಕ್ಕ ಅವಳ ಕೈಯಲ್ಲಿ ಕೊಟ್ಟುಬಿಡುತ್ತೇನೆ. ಏನುಮಾಡಿದೆ

ಎಂದು ಮತ್ತೆ ವಿಚಾರಿಸುವುದಿಲ್ಲ. ವಿಚಾರಿಸಿದಲ್ಲಿ ಹೇಳುತ್ತಾಳೆ ಎನ್ನುವ ನಂಬಿಕೆಯೂ ಇಲ್ಲ.

'ಹುಷ್ ! ಸಂಜೆ ಆಗೋದಕ್ಕಿಲ್ಲಾ ಆಗಲೇ ಕುಡಿದು ಬಿಡುತ್ತಾರೆ. ಮೈಮೇಲೆ ಪ್ರಜ್ಞೆ ಅಂಬೋದೆ ಇರೋದಿಲ್ಲ. ಮನೆ ಮಠ ಇಲ್ಲದ ಇಂತಹ ಮುಂಡೆಗಂಡರಿಂದಲೇ ಬೀದಿ ತುಂಬಿ ಹೋಗಿಬಿಡುತ್ತೆ.'

ಎಚ್ಚೆತ್ತೆ. ಹಾಗಂದವರು ಯಾರುಎಂದು ತಿಳಿಯಲು ಕಣ್ಣಾಡಿಸಿದೆ. ಹಿಂದಿನಿಂದ ಹೊಸ ಪ್ರವಾಹ. ಮುಂದೆ ಹೋದವರಲ್ಲಿ ಯಾರೋ ಅಂದಿರ ಬೇಕು. ಅವಳೇ, ಆ ದಪ್ಪನೆಯ, ಮೋಟು ಜಡೆಯ ಹೆಂಗಸೇ ಇರಬೇಕು ಹಾಗಂದದ್ದು. ಕುಡಿದು ಬಿಡುತ್ತಾರೆ ಎಂದಳು. ಹೌದು, ಕುಡಿಯುತ್ತೇನೆ, ಹಿಂದಲ ಜನ್ಮದ ಕರ್ಮ, ಕಷ್ಟದ ರೂಪದಲ್ಲಿ ಕುಡಿದು ಕುಡಿದು ಅರಗಿಸಿಕೊ ಳ್ಳುತ್ತಿದ್ದೇನೆ. ನಾನು ಬೇಡವೆಂದರೂ ಬಿಡುವುದಿಲ್ಲ ವಿಧಿ, ಹಿಡಿದು ಉಣಿ ಸುತ್ತಿದೆ. ಬೇಡವೆನ್ನುವಂತಿಲ್ಲ, ಉಣಲೇಬೇಕು.

ಅರ್ಧದಷ್ಟು ದಾರಿ ಸವೆದಿದೆ. ಏಳು ಮೈಲಿಯ ಅಂತರವಿದೆ, ನಾನು ವಾಸಮಾಡುವ ಬಿಡಾರಕ್ಕೂ, ಕೆಲಸದ ಜಾಗಕ್ಕೂ.

ಅನಂತತೆಯ ಹೊತ್ತಿಗೆಯಲ್ಲಿ ದಿನದ ಪುಟ ಮೊಗಚುತ್ತಲೇ ಇದೆ. ಯಾವ ಏರುಪೇರು ಇಲ್ಲ ಒಂದೇ ಬದಿಯಲ್ಲಿ ಮಲಗುತ್ತೇವೆ. ಇಬ್ಬರು ಒಂದೊಂದು ಮಗ್ಗಲು. ಮರೆತು ಯಾರೂ ಹೊರಳುವುದಿಲ್ಲ. ಒಮ್ಮೊಮ್ಮೆ ನನ್ನ ಮೈಯಿಗೆ ಒತ್ತಿಮಲಗುತ್ತಾಳೆ. ನನಗೆ ವಿಲವಿಲ ಒದ್ದಾಡಿದಂತೆ ಆಗು ತ್ತದೆ. ಮಿಸುಕದೆ ಮಲಗಿಯೇ ಇರುತ್ತೇನೆ. ದೇಹ ಹತ್ತಿರವಿದೆ. ಹೃದಯ ? ಹೇಳಲಾರದಷ್ಟು ದೂರವಾಗಿದೆ.

ತಪ್ಪಿನ ಅರಿವಾಗಿರಬೇಕು ಅವಳಿಗೆ. ಕಳೆದ ಮೂರು ನಾಲ್ಕು ತಿಂಗಳಿ ನಿಂದ ಅಚ್ಚರಿಪಡುವ ರೀತಿಯಲ್ಲಿ ವರ್ತಿಸುತ್ತಿದ್ದಾಳೆ. ತಾಟಿನಲ್ಲಿ ಅನ್ನ ಹಾಕಿ ಉಣ್ಣುವವರೆಗೂ ಅಲ್ಲೇ ಕೂತಿರುತ್ತಾಳೆ. ನೀರುಬೇಕೆ ಎನ್ನುತ್ತಾಳೆ. ಮಲಗಲು ಅಣಿಮಾಡುತ್ತಾಳೆ ಕೆಲಸಕ್ಕೆ ಹೋಗುವಾಗ ಕೋಟು ಒದರಿ ಕೊಡುತ್ತಾಳೆ. ಸದಾ ನಗು ನಗುತ್ತಾ ಇರುತ್ತಾಳೆ

ಆಯಾಸವೆಂದು ಮಲಗಿದಾಗ ಪಕ್ಕದಲ್ಲಿ ಗಾಳಿ ಹಾಕುತ್ತಾ ಕೂರು ತ್ತಾಳೆ. ಎಷ್ಟು ದೂರ ನಡೆದು ಬರುವುದು ? ಮುಂದಿನ ಸಾರಿ ಸಂಬಳದ

ರೊಕ್ಕ ಬಂದಾಗ ಒಂದು ರೈಲ್ವೆ ಪಾಸು ತೆಗೆದುಕೊಳ್ಳಿ ಎನ್ನುತಾಳೆ. ಧನ್ಯನಾದೆ ಪರಮಾತ್ಮನೇ ಎಂದು ಮನಸ್ಸಿನಲ್ಲಿಯೇ ಹಿಗ್ಗುತ್ತೇನೆ. ಈ ಮಾತು ಕೇಳಲಾದರೂ ಬದುಕಿರಬೇಕು ಎನ್ನಿಸುತ್ತದೆ. ಹರಿದ ಅಂಗಿಯಲ್ಲಿಯೇ ಕೈ ಒಳಸೇರಿಸಿ ಎದೆ ಸವರುತ್ತಾಳೆ. ಹಿತವಾಗುತ್ತದೆ. ಕಣ್ಣು ಮುಚ್ಚುತ್ತೇನೆ.

ಅವಳು ಹೇಳುವ ಮುನ್ನವೇ ರೈಲ್ವೆ ಪಾಸು ತೆಗೆದುಕೊಳ್ಳಲು ಸಾಧ್ಯವೇ ಎಂದು ಹಲವು ಬಾರಿ ಯೋಚಿಸಿದ್ದೇನೆ. ನಾಲ್ಕು ರೂಪಾಯಿ ಅರವತ್ತು ಪೈಸ ರೊಕ್ಕ ನುಡುಗಬೇಕು. ಆಗದೆ ಸುಮ್ಮನಿದ್ದೇನೆ. ಮಧ್ಯಾಹ್ನವೆಲಾ ಏನು ಮಾಡುತ್ತೀಯಾ ಎಂದು ಆಯ ತಪ್ಪಿ ಒಮ್ಮೆ ಕೇಳಿಬಿಡುತ್ತೇನೆ. ಎಳನೇ ನಂಬರಿನ ಮನೆಯಲ್ಲಿ ಮಕ್ಕಳು ಜಾಸ್ತಿ ಅವೆ, ಅವನ್ನು ಕೂಡಿಸಿಕೊಂಡು ಲಲ್ಲೆ ಹೊಡೀತ್ತೀನಿ ಅನ್ನುತ್ತಾಳೆ. ಸರಿ, ಒಳ್ಳೆಯದಾಯಿತು ಬಿಡು ಎನ್ನುತ್ತೇನೆ.

ಗಕ್ಕನೆ ಯೋಚನೆಯ ಚಕ್ರ ನಿಂತುಬಿಡುತ್ತದೆ. ನಾನು ವಾಸಿಸುವ ಬಿಡಾರದ ಬಳಿಗೆ ಬಂದಿದ್ದೇನೆ. ಎರಡು ಪ್ಲಾಟು ಹತ್ತಿ ಮೂರನೆಯ ಪ್ಲಾಟಿಗೆ ಹೋಗಬೇಕು. ನಡೆದುಕೊಂಡು ಬರಬಲ್ಲೆ, ಈ ಪ್ಲಾಟು ಹತ್ತಿ ಪೂರೈಸುವುದುಂಟೆ ? ಹತ್ತಿಯೇ ತೀರಬೇಕು, ಹತ್ತುತ್ತೇನೆ.

ಮಾತಿನ ಮಧ್ಯೆ, ಸಮಯ ನೋಡಿ ಹೇಳಿಬಿಡಬೇಕು, ಈ ದೀಪಾವಳಿಯಲ್ಲಿ ಸೀರೆ ತೆಗೆಯುವ ಯೋಚನೆಯಿದೆ ಎಂದು. ಅದರಿಂದಾಗಿ ಅವಳ ಮುಖ ಹಿಗ್ಗಬಹುದು.

ಬಾಗಿಲಿಗೆ ಬೀಗ ಬಡಿದಿದೆ. ಎಲ್ಲಿಗೆ ಹೋಗಿದ್ದಾಳೆ ? ನೀರಿಗೇನು ? ದಣಿವಿನ ಲೆಕ್ಕವಿಲ್ಲದೆ ಪ್ಲಾಟು ಇಳಿದು ಕೊಳಾಯಿಯಬಳಿ ನೋಡುತ್ತೇನೆ. ಅಲ್ಲೂ ಅವಳಿರುವುದಿಲ್ಲ. ಎಲ್ಲಿ ಹೋದಳು ಎಂದು ಚಿಂತಿಸುತ್ತಾ ಮತ್ತೆ ಮೆಟ್ಟಲು ಹತ್ತಿ ಬರುತ್ತೇನೆ. ಸಂಜೆಯ ಮೇಲೆ ಕತ್ತಲು ಹಿಕ್ಕೆ ಹಾಕತೊಡಗಿದೆ. ಎಳನೇ ನಂಬ್ರ ಕೋಣೆ ದಾಟಿ ಮುಂದೆ ಹೋಗಬೇಕು. ಅವಳ ಧ್ವನಿ ಸಣ್ಣಗೆ ಕೇಳಿಬರುತ್ತಿದೆ. ಮಕ್ಕಳೊಡನೆ ಆಡುತ್ತಿರಬಹುದು. ಕೂಗಲೆಂದು ಬಾಯಿ ತೆರೆಯುತ್ತೇನೆ. ಬಾಗಿಲು ಸ್ವಲ್ಪ ತೆಗೆದುಕೊಂಡಿದೆ. ಎದುರು ಪ್ಲಾಟಿನ ಮಂದಬೆಳಕು ಚೆಲ್ಲಿದೆ. ನಿಂತು ಸಂದಿಯಲ್ಲಿ ನೋಡಿದೆ. ಅವಳು ಕುಪ್ಪಸ ತೊಟ್ಟುಕೊಳ್ಳುತ್ತಿದಾಳೆ. ಮೈಮೇಲೆ ಸೀರೆಯಿಲ್ಲ. ಅದು ಕಾಲ

ಬಳಿ ಬಿದ್ದಿದೆ. ಲಂಗದೊಳಗಿನ ಹೊಟ್ಟೆ ಉಬ್ಬಿ ನಿಂತಿದೆ. ಅದನ್ನು ಅಭಿಮಾನದಿಂದ ಸವರುತ್ತಿದೆ ಏಳನೇ ನಂಬ್ರ ಕೋಣೆಯ ನಲವತ್ತು ವರ್ಷ ಪ್ರಾಯದ ಮಗು.

ಕುಸಿದೆ, ನಿಲ್ಲಲು ತ್ರಾಣಸಾಲದೆ ಕುಸಿದೆ. ಬುದ್ಧಿ ಬುಗುರಿಯಂತೆ ಗಿರಗಿರ ಎಂದು ತಿರುಗತೊಡಗಿದೆ. ನನ್ನ ಅಂತಃಕರಣಕ್ಕೆ ನೇಣು ಬಿತ್ತು ಎಂದುಕೊಂಡೆ. ಇನ್ನು ಎರಡು ನಿಮಿಷದಲ್ಲಿ ಅವಳು ಹೊರ ಬರಬಹುದು. ಈ ವೇಳೆಗೆ ಸೀರೆ ಸುತ್ತಿಕೊಂಡಿರಬೇಕು. ನನ್ನನ್ನು ಕಂಡ ಕೂಡಲೇ ಜಾಗರೂಕತೆಯ ನಗು ನಗಬಹುದು. ಮಕ್ಕಳೊಂದಿಗೆ ಆಡುತ್ತಿದ್ದೆ, ಎನ್ನಬಹುದು, ನಾನು ಮಾತಿಲ್ಲದೆ ಅವಳನ್ನು ಅನುಸರಿಸ........

ಅಂತಃಕರಣಕ್ಕೆ ನೇಣು ಬಿತ್ತು. ಎಂದುಕೊಂಡ ಕೂಡಲೇ ನಾನು ಮೇಲೆದ್ದೆ. ಪ್ಲಾಟನ್ನು ಸರಸರ ಇಳಿಯತೊಡಗಿದೆ. ಹದಿನೈದು ವರ್ಷಗಳ ಜೀವನದಲ್ಲಿ ಎಂದೂ ಅಷ್ಟು ಬೇಗನೆ ಪ್ಲಾಟು ಇಳಿದ ನೆನಪಿಲ್ಲ. ಮತ್ತೆ ನೋಡುವಲ್ಲಿ ರೈಲ್ವೆ ಹಳಿಯ ಪಕ್ಕದಲ್ಲಿ ನಿಂತಿದ್ದೆ. ಇನ್ನೆರಡು ಮಿನಿಟು. ರೈಲು ಬರಬಹುದು. ದೂರದಲ್ಲಿ ದೀಪ ಕಾಣಿಸತೊಡಗಿದೆ. ತಡಮಾಡುವಂತಿಲ್ಲ. ಹಳಿಗೆ ಅಡ್ಡಲಾಗಿ ಮಲಗಿದೆ.

ರೈಲಿನ ಚಕ್ರ ನನ್ನ ಮೇಲೆ ವೇಗವಾಗಿ ಬಂದು ಹಾದುಹೋಗುತ್ತದೆ. ಆಗ ಕಚಕ್ ಎಂದು ನನ್ನ ತಲೆ, ಕೈಕಾಲು, ಉದರ ಎಲ್ಲಾ ಬೇರೆ ಬೇರೆ ಆಗುತ್ತದೆ. ರಕ್ತದ ಮಡುವಿನಲ್ಲಿ ಗುರುತು ಸಿಗದಂತೆ ನನ್ನ ಹೆಣ ಬೀಳುತ್ತದೆ. ಆಗ ನನ್ನ ಅಂತಃಕರಣಕ್ಕೆ ಬಿದ್ದ ನೇಣಿನ ಸುದ್ದಿ ಯಾರಿಗೂ ಅರಿವಾಗುವಂತಿಲ್ಲ.

ಜರ್ ! ಒಮ್ಮೆಯೇ ರೈಲು ನಿಂತುಬಿಟ್ಟಿತು. ನನ್ನ ಸುತ್ತಲು ಜನ ಆವರಿಸಿದರು. ಒಬ್ಬ ಧಾಂಡಿಗ ನನ್ನ ಕೋಟಿನ ಕಾಲರು ಹಿಡಿದು ಮೇಲೆತ್ತಿದ. ಮುಟ್ಠಾಳ !, 'ಇವನು ಸಾಯೋಕೆ ನಾವು ತಲೆ ಕೊಡಬೇಕು ಕೂಗಿ ಪೋಲಿಸಿನವರನ್ನು !'

ಕೂಗುವ ಮೊದಲೇ ಪೋಲೀಸಿನವ ಬಂದು ನನ್ನ ಕೈಹಿಡಿದು ಎಳೆದೊಯ್ಯತೊಡಗಿದ. ನನ್ನ ಬಂಧನ ಅವನಿಗೆ ಹಿಗ್ಗು ತಂದಿರಬಹುದು. ಲೆಕ್ಕ ಮೀರಿ ಹೆಜ್ಜೆಯಿಡುತ್ತಿದ್ದ. ಪಾಪ, ಅವನೇನು ಬಲ್ಲ, ನನ್ನ ಅಂತಃಕರಣಕ್ಕೆ ಆಗಲೇ ನೇಣು ಬಿದ್ದಿರುವುದೆಂದು.

# ಮಂಜುಗಡ್ಡೆ

"ವಿಷಯ ಪ್ರವೃತ್ತಿ ಉಂಟಾಗಬಾರದು. ವಿಷಯ ಪ್ರವೃತ್ತಿ ಉಂಟಾದರೆ ಕುಟ್ಟಿ ಹಿಡಿದ ಹಾಗೆ. ಅಂಥಹ ವಸ್ತುವನ್ನು ಎಲ್ಲೆ ಎಸೆದರೂ ಅದನ್ನು ಕುಟ್ಟಿ ತಿಂದು ಲೊಡ್ಡು ಮಾಡುತ್ತಲೇ ಇರುತ್ತದೆ. ಅರಿವಿಲ್ಲದೆಯೇ ಒಂದು ದಿನ ನಾಶವಾಗಿರುತ್ತದೆ. ಕೌಶಲ್ಯವಿದ್ದವರು ಜೀವನ ಸಾಗರದಲ್ಲಿ ಮುಳುಗಿ ರತ್ನವನ್ನು ತರುತ್ತಾರೆ. ಆದರೆ ಮುಳುಗಿದವರೆಲ್ಲಾ ಸಾಯುವುದಿಲ್ಲ"........

೨

ವಿಷಯ ಪ್ರವೃತ್ತಿ ಉಂಟಾಗಬಾರದು. ವಿಷಯ ಪ್ರವೃತ್ತಿ ಉಂಟಾದರೆ ಕುಟ್ಟಿ ಹಿಡಿದ ಹಾಗೆ. ಅಂತಹ ವಸ್ತುವನ್ನು ಎಲ್ಲೆ ಎಸೆದರೂ ಅದನ್ನು ಕೊಟ್ಟಿರಿಂದು ಲೊಡ್ಡು ಮಾಡುತ್ತಲೇ ಇರುತ್ತದೆ, ಅರಿವಿಲ್ಲವೆಯೋ ಒಂದು ದಿನ ನಾಶವಾಗಿರುತ್ತದೆ. ಕೌಶಲ್ಯವಿದ್ದವರು ಜೀವನ ಸಾಗರದಲ್ಲಿ ಮುಳುಗಿ ರತ್ನವನ್ನು ತರುತ್ತಾರೆ ಆದರೆ ಮುಳುಗಿದವರೆಲ್ಲಾ ಸಾಯುವುದಿಲ್ಲ........

"ಅವ್ವಾ................"

"................................"

"ಜಾನಕವ್ವ"

"ಯಾರದು ?"

"ನಾನು ಕಣವ್ವಾ ಲಕ್ಷ್ಮೀ"

"ಏನು ಲಕ್ಷ್ಮಿ"

"ನನ್ನಮಾನ ಮರ್ಯಾದೆ ಎಲ್ಲಾ ಕಾಪಾಡಿ ; ನನ್ನ ಮನೆ ಉಳಿಸಬೇಕು"

"ಆಗಿದ್ದಾರೂ ಏನು ಅಂತೀನಿ ?"

"ಇವತ್ತು ರಾತ್ರಿ ಯಜಮಾನ್ರು ಬತ್ತಾರಂತೆ ಕಣವ್ವಾ. ಅವರು ಬಂದ ತಕ್ಷಣ ತಂಟೆ ತಕರಾರು ಮಾಡದೆ ಅವರ ಪಕ್ಕದಾಗ....ಅಯ್ಯೋ ನನ್ನ ಹಣೇಲಿ ಏನೇನು ಬರೆದೈತೋ ಕಾಣೆ ತಾಯಿ. ಕೆಲಸಾನೂ ಬೇಡ ಏನೂ ಬೇಡ ಅಂತ ಎಲ್ಲಾದ್ರೂ ಓಡಿಹೋಗನ ಅಂದ್ರೆ ಈ ಮಗ ಬೇರೆ ಆಯ್ತೈತೆ. ಎಲ್ಲಿ ಹೋಗಲಮ್ಮ ?".

"ಹಾಗಂತ ಯಾರು ಹೇಳಿದ್ದು ?"

"ಒತ್ತಾರೇನೆ ಸಿದ್ದ ಬಂದಿದ್ದ ನನ್ನವ್ವ, ಸ್ವಾಮಿಯೋರು ಸಂಜೆ ಮ್ಯಾಗೆ ಬತ್ತಾರೆ. ತಗೋ ಬುದ್ದಿ ಕೊಟ್ಟವರೆ ಎಂದು ಐದು ರೂಪಾಯಿ ಕೊಟ್ಟೋಗವನೆ ನನಗೆ ಈ ರೂಪಾಯಿನೂ ಬೇಡ, ಆ ಕೇಲಸನೂ ಬೇಡ ನಮ್ಮವ್ವಾ"

ನಿನ್ನ ಗಂಡ ನಂಜ ಎಲ್ಲೋದ?"

"ಮಾವನವರಿಗೆ ಉಸಾರಿಲ್ಲ ಅಂತ ಯಾರೋ ಬಂದು ಹೇಳಿದರು ಅದಕ್ಕೆ ನೋಡ್ಕೊಂಡು ಬತ್ತೀನಿ ಅಂತ ಹೋದ"

"ಸರಿ ನೀನು ಇನ್ನು ಹೋಗು."

"ಅವ್ವಾ ನನ್ನ ಮಾನ ಮಾತ್ರ ಕಾಪಾಡಿ. ನಮ್ಮವ್ವಾ; ಹೊಟ್ಟೆಗಿಲ್ಲದೆ ಬಂದು ಸೇರ್ಕೊಂಡೆ. ನಂಜ ಬಂದಕೂಡ್ಲೆ ಇಲ್ಲಿಂದ ಹೊರಟು ಹೋಗ್ತೀನಿ. ಅದುವರ್ಗು ಭದ್ರ ಮಾಡಿ ನಮ್ಮವ್ವಾ."

"ನೀನು ಏನೂ ಹೆದರಬೇಡ ಹೋಗು"

"ಆ ಐದು ರೂಪಾಯಿ ಇಲ್ಲಿ ಮಡಗ್ತೀನಿ ತಾಯಿ"

"ಏ ಲಕ್ಷ್ಮಿ ಬಾ ಇಲ್ಲಿ"

"ಏನವ್ವಾ?"

"ಯಾವತ್ತು ಬರ್ತೀನಿ ಅಂತ ಹೇಳಿ ಕಳಿಸಿದ್ರು ಅಂದೆ?"

"ಇವತ್ತು ಸಂಜೆ ಮ್ಯಾಗೆ ಕಣವ್ವ"

"ಹಾಗದರೆ ನೀನೊಂದು ಕೆಲಸ ಮಾಡು"

"ಹೇಳ್ರವ್ವಾ"

ಹತ್ತಿರ ಕರೆದು ಲಕ್ಷ್ಮಿಗೆ ಜಾನಕಿ ಹೇಳ ಬೇಕಾದುದನ್ನು ಹೇಳಿ ಮುಗಿಸಿ ಮತ್ತೆ ಕೇಳುತ್ತಾಳೆ.

"ಹೇಳಿದ್ದೆಲ್ಲಾ ನೆನಪಿದೆ ತಾನೆ? ಸಾಯಂಕಾಲ ನಾಲ್ಕು ಗಂಟೆಗೇನೆ ಅಲ್ಲಿಂದ ನೀನು ಹೊರಟು ಹೋಗು : ನಾಳೆಯಿಂದ ಎಲ್ಲಾ ಸರಿ ಹೋಗುತ್ತೆ"

ಲಕ್ಷ್ಮಿ ಜಾನಕಮ್ಮನ ಮಾತು ಕೇಳಿ ಆನಂದದಿಂದ ಹೊರಟಳು.

ಅವಳು ಹೋಗುವುದನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದ ಜಾನಕಮ್ಮ ನಿಟ್ಟುಸಿರು ಬಿಟ್ಟಳು.

೦ ೦ ೦ ೦

ಜಾನಕಿ, ರಾಮಚಂದ್ರನನ್ನು ಮದುವೆಯಾಗಿ ಆರು ವರ್ಷಗಳು ಸಂದಿವೆ. ಭವ್ಯವಾದ ಮನೆಯಿದೆ. ಅದಕ್ಕೂ ಮಿಗಿಲಾಗಿ ಸುತ್ತಲೂ ತೋಟದ ರೂಪದಲ್ಲಿ ನಕ್ಕು ನಿಂತಿರುವ ನಿಸರ್ಗದೇವತೆ ಮೈತುಂಬಾ ಹಸಿರು ಸೆರಗು ಹೊದ್ದು, ತುಂಬಿ ನಲ್ಲಿಯುತ್ತಿದ್ದಾಳೆ. ಬೇಡವೆಂದರೂ ಬರುವಷ್ಟು ಹಣವಿದೆ. ಮತ್ತೇನಾಗಬೇಕು ಈ ಪೃಥ್ವಿಯಲ್ಲಿ! ಇದು ಯಾರಿಗುಂಟು ಯಾರಿಗಿಲ್ಲ.

ಪಾಪ ಅದು ಅವಳಿಗೇನೇ ಸರಿಯಾಗಿ ಅರ್ಥವಾಗಿಲ್ಲ : ಬೇಕಾದಷ್ಟಿದೆ. ಸಾಮಾನ್ಯವಾದಷ್ಟಲ್ಲ. ಜಾಸ್ತಿ, ಬೇಕಾದಷ್ಟು. ಇಲ್ಲ ; ಅಜೀರ್ಣವಾಗುವಷ್ಟು ಹಣವಿದೆ. ಪೆಟ್ಟಿಗೆ ತುಂಬಾ ಸೀರೆ ಇದೆ. ಯಾವುದು ಬೇಕು? ನೀಲಿಯ ಆಕಾಶದ ನಕುಲೆ? ಕೆಂಪೇ! ಕಪ್ಪೇ? ಹಸಿರೇ! ಕಿತ್ತಲೆಬಣ್ಣದ್ದೇ? ಯಾವುದು ಬೇಕು? ಇಲ್ಲ ಲೆಕ್ಕಹಾಕಲು ಸಾಧ್ಯವೇ ಇಲ್ಲ. ದಿನಕ್ಕೆರಡು ಉಟ್ಟರೂ ತೀರದಷ್ಟು ತುಂಬಿ ಬಿದ್ದಿದೆ.

ಬಂಗಾರವೋ? ಅವಳಿಗಿಷ್ಟವಿಲ್ಲದೆಯೇ ಅರ್ಥ ತೆಗೆದಿಟ್ಟಿದ್ದಾಳೆ. ಆದರೆ ಇರುವುದೇ ಮೈಯಿಗೆ ಭಾರ ಎನ್ನುತ್ತಾಳೆ.

ಆದಕ್ಕೆ ಯಾರ ಪಾರುಪತ್ಯವೂ ಇಲ್ಲವಲ್ಲ. ಇದೆಲ್ಲವನ್ನು ಉಂಡು ಉಡಲೆಂದೇ ರಾಮಚಂದ್ರ ತಂದಿದ್ದು ತುಂಬಿದ್ದು.

"ಹೆಣ್ಣೇ ಬಿಸಿನೀರು ಕಾದಿದೆಯಂತೆ, ಹೋಗಿ ಎರೆದುಕೊಳ್ಳಬಹುದಲ್ಲ? ಅದೋ ತಟ್ಟೆಯಲ್ಲಿ ಉಡುಪಿಯ ಅಡುಗೆಯವನು ಮಾಡಿಟ್ಟ ಪರಿಮಳಪೂರಿತ ಅಡಿಗೆ ಘಮ ಘಮಿಸುತ್ತಿದೆಯಲ್ಲ! ಬೇಡವೇನು? ಅಗೋ ತಿಳಿಹಸಿರು ಜರತಾರಿ ಸೀರೆ ಉಡಲು ಕಾದಿದೆಯಲ್ಲ.

ಇದೇಕೆ? ಅಶೋಕವನ ಸೇರಿದ ಜಾನಕಿಯಂತೆ? ಯಾವುದುಬೇಡ? ಎಲ್ಲ ದರಮೇಲೆಯೂ ದ್ವೇಷ!

ಬೇಡ ಅದು ಯಾವುದೂ ಜಾನಕಿಗೆ ಬೇಡವಾಗಿದೆ. ಯಾವಾಗಲೂ

ಗಂಭೀರವಾಗಿ ಆಲೋಚಿಸುತ್ತಾಳೆ. ನಿಟ್ಟುಸಿರು ಬಿಡುತ್ತಾಳೆ. ಮತ್ತೆ ಅಲೆಯುತ್ತಾಳೆ. ತೋಟದ ಒಂದು ನಿಟ್ಟಿನಿಂದ ಮತ್ತೊಂದು ನಿಟ್ಟಿಗೆ ಓಡುತ್ತಾಳೆ. ನಿಂತ ಜಾಗದಲ್ಲಿ ನಿಲ್ಲುವುದಿಲ್ಲ. ಕಾಫಿಗಿಡದಿಂದ ಗಿಡಕ್ಕೆ ಹೋಗುತ್ತಾಳೆ. ಅಭಿಮಾನದಿಂದ ಅದರ ಹೂವನ್ನು ಆಘ್ರಾಣಿಸುತ್ತಾಳೆ. ಆನಂದದಿಂದ ಕೈ ತಟ್ಟುತ್ತಾಳೆ. ಮತ್ತೆ ಜೋರಾಗಿ ನಗುತ್ತಾಳೆ.

ಇದೆಯೇನು ನಗುವುದು ? ಅಳುತ್ತಿರುವಳಲ್ಲ !

ಆಗೋ ಅದೇ ಗಂಭೀರ ಮುಖ ಮುದ್ರೆ.

"ಅವ್ವಾ........"

"ಏನು ?"

"ನನ್ನ ಮಾನ ಕಾಪಾಡಿ"

"ಸರಿ ನೀನು ಇನ್ನು ಹೋಗು"

ಜಾನಕಿ ರಾಮಚಂದ್ರನನ್ನು ಮದುವೆಯಾಗಿ ಆರು ವರ್ಷಗಳು ಸಂದುಹೋಗಿವೆ. ಬೇಕಾದಷ್ಟಿದೆ. ಅವಳ ಮನೆಯ ಉಗ್ರಾಣ ತುಂಬಿ ತುಳುಕುತ್ತಿದೆ. ಆದರೆ ಅವಳ ಒಡಲು ?

ಉಗ್ರಾಣ ತುಂಬಿದ್ದರೂ ಅವಳು ಅದನ್ನು ಅನುಭವಿಸಲಾರಳು ಎಲ್ಲವೂ ತುಂಬಿವೆ. ಆದರೆ ಮನ ?

ಆದರೆ ಮನ ? .ಹ್ಞು ನಾಡಿ ಇಲ್ಲಿ ಸಿಕ್ಕಿತ್ತು ನೋಡಿ. ಇನ್ನು ಕಾಯಿಲೆಯ ಪತ್ತೆ ಆಗದೆ ಉಂಟೆ ? ತಲೆ ಕೆರೆದುಕೊಂಡು ಪೆನ್ನಿನ ಕ್ಯಾಪು ತೆಗೆದು ಖಾಲಿ ಹಾಳೆಗಳನ್ನು ಮುಂದೆ ಚೆಲ್ಲಿಕೊಂಡು ಹುಬ್ಬು ಮೇಲೆ ಸಿಕ್ಕಿಸಿ ಮುಸುಕುಗುದ್ದಿನ ಕಸರತ್ತು ಮಾಡುವ ಸಾಹಿತಿ ?........

ಅವಳು ಆ ಮನೆಗೆ ಬಂದ ಮೂರು ತಿಂಗಳಿನಲ್ಲಿಯೇ, ಅವಳ ಕುಡಿ ಮನಸ್ಸು ರಾಮದಂದ್ರಯ್ಯನ ನಡತೆ ಕಂಡು ಮುರುಟಿ ಹೋಯಿತು. ದಿನಕ್ಕೊಂದು ಬೇಟೆ ? ಯಜ್ಞಪಶು ಹೊಸದಾಗಬೇಕು. ಅದನ್ನು ಅರಸುವ ಕೆಲಸ ಸಿದ್ದನದು. ಅವನು ಆರಿಸಿದ್ದನ್ನು ರಾಮಚಂದ್ರಯ್ಯ ಒಪ್ಪಿಕೊಳ್ಳು ತ್ತಾನೆ.

ಅವನ ಕಣ್ಣಿಗೆ ಬಿದ್ದ ಯಾವ ಯಜ್ಞ ಪಶುವೂ, ಅವನಿಂದ ತಪ್ಪಿಸಿ

ಕೊಳ್ಳುವುದೆನ್ನುವ ಸಂಗತಿ ಮರೆಯಬೇಕು. ಏನೇ ಬರಲಿ, ಏನೇ ಆಗಲಿ ಎಲ್ಲದಕ್ಕೂ ಸಿದ್ಧವಾಗಿಯೇ ಬರುತ್ತಿದ್ದುದು ಅವರ ಪದ್ಧತಿ.

ಕಾಫಿ ತೋಟಗಳಲ್ಲಿಯೇ ಹೆಚ್ಚಿನ ಕೆಲಸ ದೊರೆಯುವ ಸ್ಥಳವೆಂದರೆ ರಾಮಚಂದ್ರಯ್ಯನ ತೋಟದ್ದು. ಕೈತುಂಬಾ ಸಂಬಳದ ಆಸೆ ಬೇರೆ. ನಾಮುಂದು ತಾಮುಂದು ಎಂದು ಮೇಲೆ ಬಿದ್ದು ಕೆಲಸಕ್ಕೆ ಹೋಗುತ್ತಾರೆ. ಮತ್ತೆ ವಾರ ಕಳೆಯುವುದರಲ್ಲಿ ಅರ್ಧದಷ್ಟು ಜನ ಕೂಲಿಗಳು ಹೊಸಬರು.

ವಿಷವ್ಯೂಹ ಅವ್ಯಾಹತವಾಗಿ ಸಾಗಿಯೇ ಸಾಗುತ್ತದೆ. ರಾಮಚಂದ್ರಯ್ಯನನ್ನು ನಿಲ್ಲಿಸುವರುಂಟೆ ? ಸುರೆ ಅವನ ತಲೆಯನ್ನು ಬುಗುರಿ ಆಡಿಸುವಂತೆ ಆಡಿಸ ತೊಡಗಿದೆ. ಅದರಲ್ಲಿಯೇ ಮುಳುಗಿ ಹೋಗಿದ್ದಾನೆ. ಎಚ್ಚರ ಯಾವಾಗಲೋ. ನೆಲದಲ್ಲಿ ಆಡುತ್ತಿದ್ದ ಬುಗುರಿ ನಿದ್ದೆ ಕಟ್ಟಿದಂತಿದೆ. ಸುರೆ ಒಂದೇ ಆಗಿದ್ದರೆ ಅವನ ತಲೆಯ ಬುಗುರಿ ಅಷ್ಟು ನಿದ್ದೆ ಕಟ್ಟುತ್ತಿರಲಿಲ್ಲವೋ ಏನೋ. ಆದರೆ ಅದಕ್ಕೆ ಹೆಣ್ಣಿನ ಜಾಟೆ ದಿನವೂ ಹೊಸದೆನ್ನುತ್ತಾನೆ ಸಿದ್ಧ.

ಕೈಯಿಗೆ ಬಾಟಲಿ ಕೊಡುತ್ತಾನೆ. ಬೇಕೆಂದಾಗ ಸಾಕು ಎನ್ನುತ್ತಾನೆ. ಬೇಡವೆಂದಾಗ "ಕುಡಿಯಬೇಕು ದಣಿ ಕುಡಿಯಬೇಕು. ನನ್ನ ದಣಿ, ಕುಡಿದು ರಾಜರಾಗಬೇಕು" ಎನ್ನುತ್ತಾನೆ. ಆಯಿತು ; ಕುಡಿದವನ ಕೈ ಹಿಡಿದು ಕೊಂಡು, ಯಾವುದಾದರೊಂದು ಹಟ್ಟಿಯಲ್ಲಿ ಯಾವುದಾದರೊಂದು ಹೆಣ್ಣಿನ ಸಹವಾಸ ಮಾಡಿಸುತ್ತಾನೆ.

"ಥೂ ಇಸ್ಸಿ ! ಏನಿದು ಮನುಷ್ಯರೇ !" ಅರಿಯದವರಿಗೆ ಇದೆಲ್ಲಾ ಹೊಸದು. ಇದನ್ನೆಲ್ಲಾ ಮಾಡುವವರನ್ನು ಕಂಡರೆ ಆ ಅನುಮಾನ ಬಾರದೆ ಇರುವುದಿಲ್ಲ. ಅವಿಲ್ಲದೆ ಹೋದರೆ ಮನುಷ್ಯ ಗುಂಪಿನಿಂದ ಹೊರತೇ ?"

ಅಗೋ ಜಾನಕಿ ಮತ್ತೆ ಅಳುತ್ತಿದ್ದಾಳೆ.

"ಸ್ವಾಮಿ, ಬೇಡ ನನ್ನ ರಾಜ ಈ ಪ್ರಾರಬ್ಧ ಎಲ್ಲಿ ಬಂತು ನಿಮಗೆ. ಕುಡಿಯೋದು ಕಲಿತಿರಿ ; ಹೊಟ್ಟೆಗೆ ಸರಿಯಾಗಿ ಊಟಾನೇ ಮಾಡೋದಿಲ್ಲ ವಲ್ಲ. ಮೈಯೆಲ್ಲಾ ಸುಕ್ಕುಗಟ್ಟಿದೆ. ಕಣ್ಣೆಲ್ಲಾ ಒಳಗೆಹೋಗಿದೆ. ದಮ್ಮಯ್ಯಾ ಅಂತೀನಿ ಸ್ವಾಮಿ ಬಿಟ್ಟು ಸುಖವಾಗಿರಿ"

"ನಿಂಗೆ ಯಾರು ಹೇಳಿದ್ದು ? ನಾನು ಕುಡೀತೀನಂತ. ಮುಠಾಳರು ತಿಂದುಕೊಂಡು ತೆಪ್ಪಗೆ ಬಿದ್ದಿರಲಾರದೆ, ಈ ಕೆಲಸ ಬೇರೆ ಮಾಡ್ತಾರಾ ?"

"ನೀವು ಬಿಡ್ತೀನಿ ಅಂತ ಆಣೆ ಮಾಡಿ ಹೇಳೋವರ್ಗ್ಗ ನಾನು ನಿಮ್ಮ ಕಾಲುಬಿಡೋದಿಲ್ಲಾ."

ಹೆಣ್ಣಿನ ಹಠ ! ಕಣ್ಣೀರಿಗೆ ಸೋಲುಂಟೆ ?

"ನೀನು ಕಾಲುಬಿಡು ಜಾನು ನಾನು ಕುಡಿಯೋದಿಲ್ಲ"

"ನಿಜವಾಗಿಯೂ"

"ನಿನ್ನಾಣೆಗೂ"

"ಹಾಗಾದರೆ ಇನ್ನುಮುಂದೆ ಇಲ್ಲಿಯ ಯಾವ ಕೂಲಿಯುವಳನ್ನೂ ಮುಟ್ಟೋಲ್ಲಾ ಅಂತ ಆಣೆ ಮಾಡಿ."

"ಥತ್ ! ಹೊಲಸು ಪ್ರಾರಬ್ಧ ! ಇಲ್ಲಿಯುವರೆವಿಗೂ ಬರಲು ಕಾರಣ ? ನಾಯಿ ಸೂಳೆ ಮಕ್ಕಳನ್ನು ಕೊಂದುಬಿಡಬೇಕು."

"ಹೇಳಿ ಸ್ವಾಮಿ"— ಮತ್ತೆ ಒತ್ತಾಯದ ದಾನಕ್ಕೆ ಬೇಡಿಕೆ.

"ಆಯಿತು ಇನ್ನುಮುಂದೆ ಮುಟ್ಟೋದಿಲ್ಲ."

ರಾಮಚಂದ್ರಯ್ಯನಿಂದ ಜಾನಕಿ ಇಂತಹ ಎಷ್ಟೋ ಆಣೆಗಳನ್ನು ಮಾಡಿಸಿಕೊಂಡಿದ್ದಾಳೆ. ಆದರೆ ಉಪಯೋಗ ಉಂಟೇ ? ಆಣೆಗಳೆಲ್ಲ ಪೈಸಗಳಾಗಿ ಮಾರ್ಪಟ್ಟಿರುವಾಗ ಆಣೆಗೆ ಬೆಲೆ ಎಲ್ಲಿಯುದು ?

"ಆಯಿತು ಇನ್ನುಮುಂದೆ ಮುಟ್ಟೋದಿಲ್ಲಾ" ಎಂದು ಹೇಳಿದ ರಾಮಚಂದ್ರಯ್ಯ ಹೋದದ್ದು ಬೇರೆ ಎಲ್ಲಿಗೂ ಅಲ್ಲ. ಕುಡಿಯಲಿಕ್ಕೆ. ಅವನ ಹಿಂದೆಯೇ ಸರ್ವದಾ ಹಿಂದೆಯೇಸಿದ್ಧವಾಗಿರುತ್ತಿದ್ದ ಸಿದ್ದ. ಯಾವುದರಲ್ಲಿಯೂ ಲೋಪ ಕಾಣದೆ ರಾಮಚಂದ್ರಯ್ಯನ ಯಜ್ಞ ಪೂರ್ತಿಯಾಗುತ್ತದೆ.

"ಅವ್ವಾ"

"ಏನು ?"

"ನನ್ನ ಮಾನ ಕಾಪಾಡಿ"

"ಸರಿ ನೀನು ಇನ್ನು ಹೋಗು"

ದಿನವೂ ಒಬ್ಬರಲ್ಲ ಒಬ್ಬರು ಅವಳ ಮನೆಯ ಮುಂದೆ ಬಂದು ಸೆರಗೊಡ್ಡಿ ಬೇಡಿಕೊಳ್ಳುತ್ತಾರೆ. ಮಾನಕ್ಕಾಗಿ-ಶೀಲಕ್ಕಾಗಿ. ಹೊಟ್ಟೆಯ ಪಾಡಿಗಾಗಿ, ಕೂಲಿಯ ಕೆಲಸಕ್ಕೆ ಬರುತ್ತಾರೆ. ಬಂದವರು ಒಗ್ಗಿದವರು ಕೈ ತುಂಬಾ ಕೂಲಿ ಪಡೆದು ನಡೆಯುತ್ತಾರೆ. ಆದರೆ ಆ ಗಾಳಿ ಒಗ್ಗದವರು

ಶೀಲ ಕಳೆದುಕೊಂಡು, ತೋಟದ ಮರದ ಟೊಂಗೆಗೋ, ಕೊಳದ ಸ್ನೇಹಕ್ಕೊ ಆತುಬೀಳುತ್ತಾರೆ. ಕೆಲವರು ಹೆವರಿ ಕೂಲಿಯನ್ನು ಕೇಳದೆ ಓಡಿದ್ದುಂಟು !

ಅತ್ತು, ಅಂಗಲಾಚಿ ಬೇಡಿಕೊಂಡದ್ದಾಯಿತು. ಪ್ರಯೋಜನವಾಗ ಲಿಲ್ಲ.

ಮುನಿಸಿಕೊಂಡು ಊಟಬಿಟ್ಟು ಕೂತಿದ್ದಾಯಿತು. ಅದರಿಂದ ಜಾನ ಕಿಯ ಶಕ್ತಿ ಕುಂದಿತೆ ವಿನಾ ಪ್ರಯೋಜನವಾಗಲಿಲ್ಲ.

"ಅವ್ವಾ...."

"ಏನು ?"

"ನನ್ನ ಮಾನ ..."

ಬೆಳಗಾದರೆ ಮತ್ತೆ ಅದೇ ಕೂಗು. ಅದನ್ನು ಕೇಳಿಕೊಂಡು ತನ್ನಿಂದೇನೂ ಮಾಡುವಂತಿಲ್ಲ. ತನ್ನ ಮುಂದೆ ಆಗಬಾರದಕೆಲಸದ ಭೈರವ ನೃತ್ಯ ಸಾಗಿದ್ದರೂ, ಸುಮ್ಮನೆ ಕೂಡಬೇಕು. ಕಣ್ಣುಮುಂದೆಯೇ ಹಲವು ಜೀವಗಳ ಶೀಲದ ಸೂರೆ !

"ಯಾರೋ ಪುಟ್ಟಿ ಅಂತೆ. ತೋಟದ ಮರಕ್ಕೆ ನೇಣು ಹಾಕಿಕೊಂಡ ವಳೆ. ಇವತ್ತು ಯಾರೋ ಗೌರಿಯಂತೆ ಕೊಳಕ್ಕೆ ನೊಗಚಿಕೊಂಡಿದ್ದಾಳೆ." ದಿನವೂ ಕಸಗುಡಿಸುವಾಗ ಈ ರೀತಿಯ ಒಂದಲ್ಲಾ ಒಂದು ಪುರಾಣ ಓದು ತ್ತಾಳೆ ಸುಬ್ಬಿ. ಅದನ್ನು ಕೇಳಿಯೇ ಗಡಗಡ ನಡುಗುತ್ತಾಳೆ ಜಾನಕಿ. ಸತ್ತ ಆ ದೇಹಗಳು ಪ್ರೇತಗಳಾಗಿ ತನ್ನ ಮುಂದೆ ದೈನ್ಯದಿಂದ ಕೈಮುಗಿದು ಏನೋ ಬೇಡುತ್ತಲಿರುವಂತಿವೆ........

ಅವ್ವಾ.

"ಏನು ?"

"ನನ್ನ ಮಾನ........"

"ಸರಿ ನೀನು ಹೋಗು"

ಬಾಯಲ್ಲಿ ಅದೇ ಮಾಮೂಲು ಮಂತ್ರ. ಹುಚ್ಚುನಗೆ ! ಒಮ್ಮೊಮ್ಮೆ ತನ್ನ ಗಂಡನಿಗೆ ಏನಾದರೂ ಮಾಡಿ ಬುದ್ಧಿ ಕಲಿಸಿಯೇಬಿಡಬೇಕೆಂದು, ಗಂಡ ನಿದ್ದ ಕಡೆ ರಭಸದಿಂದ ನುಗ್ಗುತ್ತಾಳೆ.

ಅವನನ್ನು ನೋಡಿದೊಡನೆಯೇ ಆವೇಗ ಜರ್ರೆಂದು ಇಳಿದುಹೋಗು ತ್ತದೆ.

ಮತ್ತೆ ಅದೇ ಯಾಚನೆಯ ನೋಟ ?

ಹಾಗಾದರೆ ಈ ಪ್ರಕರಣ ಮುಗಿಯುವ ಪರಿಯೆಂತು ? ಇದಕ್ಕೆ ಅಂತ್ಯವೇ ಇಲ್ಲವೇನು ?

ಈ ಅನಾಚಾರಗಳನ್ನೆಲ್ಲಾ ನೋಡಿಕೊಂಡು ಸುಮ್ಮನಿರುವುದಕ್ಕಿಂತ ಸಾಯುವುದೇ ಮೇಲೆಂದು ಹಗ್ಗಹಿಡಿದು ರೂಮಿನ ಬಾಗಿಲು ಮುಚ್ಚಿಕೊಂಡು ಕೊಂಡಿಹಾಕಿ ಕೊಂಡದ್ದುಂಟು. ಮರುಗಳಿಯಲ್ಲಿಯೇ ವಿವೇಕದ ಉದಯ. ಸತ್ತರೆ ಹತ್ತರಜೊತೆಯಲ್ಲಿ ಹನ್ನೊಂದಾಯಿತು. ಅಷ್ಟೇ.

ಅದರಿಂದ ಸಾಧಿಸಿದ್ದಾದರೂ ಏನು ? ಗಂಡ ಸುಧಾರಿಸಿದನೆ ? ಇಲ್ಲವೇ ಯಾರ ಮಾನವಾದರೂ ಕಾಪಾಡಿದಂತಾಯಿತೇ ? ಕಡೆಗೆ ಏನು ಇಲ್ಲ. ಹಾಗಾದರೆ ಸಾಯಬೇಕಾದರೂ ಏಕೆ ? ಇದ್ದೇ ಎಂದಾದರೂ ಒಂದುದಿನ ಸರಿ ಮಾಡಲು ಸಾಧ್ಯವೇ ಎಂದುಕೊಂಡು ಪ್ರಯತ್ನಿಸಿ ನೋಡಬಾರದೇಕೆ ?

ಕೊಂಡಿಯಸದ್ದು. ರೂಮಿನ ಬಾಗಿಲು ಮತ್ತೆ ತೆರೆಯುತ್ತದೆ. ಜಾನಕಿ ಮತ್ತೆ ಹೊರಬರುತ್ತಾಳೆ. ಕೈ ಯಲ್ಲಿಯ ಹಗ್ಗ ಮುನಿಸಿಕೊಂಡು ಮೂಲೆ ಸೇರುತ್ತದೆ.

ಕಡೆಯ ಪ್ರಯತ್ನವಾಗಿ ಸಿದ್ದನನ್ನು ಕರೆದು ಛೀಮಾರಿ ಹಾಕುತ್ತಾಳೆ. ಬಗ್ಗಿಸಿದ ತಲೆಯೆತ್ತುವ ಭೂಪನೆ ಸಿದ್ಧ ? ಜಾನಕಮ್ಮ ಬೈಯುವಾಗ ಗೋಡೆಗೆ ಅಂಟಿಸಿಂತರೆ ತೀರಿತು. ಅವನಿಗೆ ಹೇಳುವುದೂ ಒಂದೇ, ಗೋಡೆಗೆ ಹೇಳು ವುದೂ ಒಂದೇ ! ಮಾತಿನಮಳೆ ನಿಂತಮೇಲೆ ಛಳಿಮಳೆಯಲ್ಲಿ ನೆನೆದ ನಾಯಿ ಯಂತೆ, ತಲೆಗೆ ಸುತ್ತಿದ್ದ ಬಟ್ಟೆಯನ್ನು ಕೊಡವಿಕೊಂಡು ಓಡುತ್ತಾನೆ.

ಮತ್ತೊಂದು ದಿನ ಕಳಯಿತು. ಮತೊಂದು ಹಗಲು. ಮತ್ತೊಂದು ರಾತ್ರಿ.

ಏನಾದರೂ ಮಾಡಬೇಕೆಂದಿದ್ದ ಜಾನಕಮ್ಮನಿಗೆ ಏನೂ ಮಾಡಲಾಗ ಲಿಲ್ಲ. ತೋಟದಲ್ಲಿನ ಅರಳಿದ್ದ ಪುಷ್ಪಗಳನ್ನು; ಕೆಂಪುಸೂಸಿ ಎಲೆ ಮರೆ ಮಾಡಿ ನಿಂತಿರುವ ಆ ಹಣ್ಣುಗಳನ್ನು ನೋಡಿ ಆನಂದದಿಂದ ಕುಣಿಯುತ್ತಾ

ಹೋಗಿ ತಬ್ಬಿಕೊಳ್ಳಬೇಕೆನಿಸುತ್ತದೆ. ಹಾಗೇ ಮಾಡಲೆಂದೇ ಅಲ್ಲಿಗೆ ಓಡು ತ್ತಾಳೆ

ಆದರೆ ?

ಕಿವಿಯಲ್ಲಿ ಏನೋ ಮೊರೆತ.

"ಅವ್ವಾ...."

"ಏನು ?"

"ನನ್ನ ಮಾನ"

ಅಗೋ ನಲಿಯುತ್ತಿದ್ದವಳು ಒಮ್ಮೆಯೇ ಹಾವು ತುಳಿದವಳಂತೆ ಬೆಚ್ಚಿ ಬಿದ್ದಳು. ಹಾಡುತ್ತಿದ್ದ ವದನದಿಂದ ದುಃಖದ ಆಕ್ರಂದನ ?

ಮತ್ತೆ ನಗಲು ಪ್ರಯತ್ನಿಸುತ್ತಾಳೆ.

........ಆದರೆ ?

ಅದೇ ಕಣ್ಣುಮುಚ್ಚಾಲೆ ಆಟ.' ಆದರೆ ಅದರಲ್ಲಿ ಸೋತು ಹಣ್ಣಾಗಿ ಹೋಗಿದ್ದಾಳೆ ಜಾನಕಿ.

o o o o

"ಅವ್ವಾ....."

"ಜಾನಕವ್ವಾ ....."

"ಯಾರದು ? ನಿಂತಲ್ಲಿಯೇ ಬೆಚ್ಚಿಬೀಳುತ್ತಾಳೆ ಜಾನಕಿ"

"ನಾನು ಲಕ್ಷ್ಮಿ"

"ಏನು ?"

"ನಾಲ್ಕುಗಂಟೆಗೆ ಬಾ ಅಂದ್ರಲ್ಲವ್ವಾ ?

"ಆಗಲೇ ನಾಲ್ಕು ಗಂಟೇನಾ ?"

"ಹೂ ಕಣ್ರವ್ವಾ"

"ಬಂದೆ ಒಂದು ನಿಮಿಷ ನಿಲ್ಲು."

ಒಳಸೇರಿದ ಜಾನಕಿ ತನ್ನ ಒಳ್ಳೆಯ ನಾಲ್ಕು ಸೀರೆಯನ್ನು ಒಂದು ಗಂಟು ಮಾಡಿ ಕೈಯಲ್ಲಿ ಹಲವು ರೂಪಾಯಿಗಳನ್ನು ಹಿಡಿದುಕೊಂಡು ಬಂದಳು.

"ತಗೊ ಲಕ್ಷ್ಮೀ. ಇದೆಲ್ಲ ತಗೊಂಡು ನೀನು ಈಗಲೇ ಹೊರಟು ಹೋಗು ತಿಳಿಯದೆ ನನ್ನಿಂದೇನಾದರೂ ಅಪಚಾರವಾಗಿದ್ದರೆ ಕ್ಷಮಿಸಿಬಿಡು. ಬೇರೆಲ್ಲಾದ್ರೂ ಒಳ್ಳೆಯಕಡೆ ಹೋಗಿ ಕೆಲಸಮಾಡಿ ಸುಖವಾಗಿರು" ಧ್ವನಿ ಬಾರೈಸಿತ್ತು.

"ನೂರುವರ್ಷ ಚೆಂದಾಗಿಬಾಳು ನಮ್ಮವ್ವಾ ನಾನಿನ್ನು ಬರ್ತೀನಿ"

ಅಪ್ಪಾಲೆ ತಿಪ್ಪಾಲೆಯಾಡುತ್ತಿದ್ದ ಗಾಳಿ ಅವಳ ಹಿಂದೆಯೇ ಓಡತೊಡಗಿತು. ಮಧ್ಯಾನ ಲಕ್ಷ್ಮೀ ಬಿಟ್ಟುಹೋದ ಐದು ರೂಪಾಯಿಗಳ ನಾಣ್ಯಗಳು ಇನ್ನೂ ಅಲ್ಲೆಬಿದಿದ್ದವು. ಅದನ್ನು ತೆಗೆದುಕೊಂಡ ಜಾನಕಿ ಒಳನಡೆದಳು.

ದಿನಕರ ದಣಿದು ಪಡವಲು ಸೇರಿ ತಾಸು ಕಳೆದಿವೆ. ನಿಶೆ ನಿಧಾನವಾಗಿ ತನ್ನ ಸೆರಗನ್ನು ಪೃಥ್ವಿಯಮೇಲೆ ಹಾಸತೊಡಗಿದ್ದಾಳು.

ರಾಮಚಂದ್ರಯ್ಯನಿಗೆ ಇದರ ಯಾವುದರ ಪರಿವೆಯೇ ಇಲ್ಲ. ಬಾಯಲ್ಲಿ ಹೊಗೆ ಕಾರುತ್ತಾ, ತೂರುತ್ತಾ, ತೂರುತ್ತಾ, ಸಾಗಿದ್ದಾನೆ. ಅವನ ಕೈ ದೀಪ, ಸಿದ್ಧ ಮುಂದಿನ ಜಾಗ ಬಿಟ್ಟಾನೆಯೇ ?

"ಲೋ ಸಿದ್ಧ ಎಲ್ಲೋ ಆ ಹಾಳಾದೋಳ ಮನೆ ?"

"ಅಗೋ ಅದೇಕಣ್ಬುದ್ದಿ, ಈ ಸಾಲುದಾಟಿ ಮುಂದಿನ ಸಾಲುವ್ಯಾಗೆ ಹೋಗಬೇಕು. ಹಣ್ಣು ಕಾಯೋಕೆ ಅಂತ ಕೆಳಗಲಬದಿಲೇ ಹಟ್ಟಿಹಾಕ್ಕೊಂಡವಳೆ"

"ಸರಿ ನಡಿ"

"ಬುದ್ಧಿಯೋರಾ ಇದೇ ಅವಳ ಅಟ್ಟಿ"

"ಕೊಡೋ ಇನ್ನೊಂದು ಸ್ವಲ್ಪ"

"ಈಗಲೇ ವಸಿಜಾಸ್ತಿ ಆಗೈತರಾ"

"ಕೊಡೊಲೋ ಮಂಗ ನಿನ್ನ ಮಗನೆ ಕೊಡೊ........"

ಅನಂತತೆಯ ಮಂಚದಲ್ಲಿ ಕತ್ತಲು ಹೆತ್ತು ನರಳತೊಡಗಿತು. ಬೀಸು ಗಾಳಿಯ ನಿಡುಸುಯ್ಲು. "ತಕ್ಕೊಳ್ಳಿ ಬುದ್ದಿ" ಅಲ್ಲಿಯೇ ಮತ್ತೆ ಪ್ರಾರಂಭವಾಯಿತು ಸುರಾಭಿಷೇಕ.

"ನೀ ... ....ಹೋ........"

"ಆಗಲೀ ಬುದ್ದಿ ನಾನಿನ್ನು ಹೋಗ್ತೀನಿ"

"ಹೋ........"

ಸಿದ್ಧ ಹೊರಹೊರಟ. ರಾಮಚಂದ್ರಯ್ಯ ಹಟ್ಟಿಂಯ ಬಾಗಿಲು ನೂಕಿಕೊಂಡು ಒಳನಡೆದ. ಅಲ್ಲಿಯೇ ಮಂಕಾಗಿ ಉರಿಯುತ್ತಿದ್ದ ದೀಪ ಇವನು ಬಾಗಿಲು ನೂಕಿದ ರಭಸಕ್ಕೆ, ಬೀಸುತ್ತಿದ್ದ ಗಾಳಿ ಒಮ್ಮೆಯೇ ಒಳಕ್ಕೆ ಲಗ್ಗೆ ಹಾಕಿ ದೀಪ ನಂದಿಸಿತು.

"ಬೇವಾರ್ಸಿ....ದೀಪ ಬೇರೆ ಹೋ...."

ಕೈಯಲ್ಲಿ ಹಿಡಿದಿದ್ದ ಬಾಗಿಲನ್ನು ಮತ್ತೊಮ್ಮೆ ಅಗಲವಾಗಿ ತೆರೆದ. ಮೂಲೆಯಲ್ಲಿ ವ್ಯಕ್ತಿಯೊಂದು ಮಲಗಿರುವುದು ಗೋಚರವಾಯಿತು.

ಬಾಗಿಲು ಹಾಕಿಕೊಂಡು ಕತ್ತಲಲ್ಲೇ ತೂರಾಡತೊಡಗಿದ. ಆ ತುರಾಟದಲ್ಲಿ ಬಾಗಿಲಿಗೆ ತಲೆ ಎಷ್ಟು ಬಾರಿ ತಗುಲಿತೋ ?

ಏ ನಾ ಬಂದ್ರೂ ಮಾತನಾಡದೆ ಕತ್ತೆ ಬಿದ್ದಾಂಗೆ ಬಿದ್ದಿದ್ದೀಯಾ ಕೈಗೆ ಸಿಕ್ಕು.

ಮುಂ...."

ತೂರಾಡುತ್ತಿದ್ದವ ಒಮ್ಮೇಯೇ ಬಿದ್ದ. ಕಾಲಿಗೆ ಪಾತ್ರೆಯೊಂದು ಸಿಕ್ಕಿಕೊಂಡಿತ್ತು. ಬಿದ್ದಲ್ಲಿಯೇ ಕೈಚಾಚಿ ಹುಡುಕತೊಡಗಿದ್ದ.

"ಹ್ಹಾಂ ! ಸಿಕ್ಕಿದೆಯಾ. ಕತ್ತಲೇಲಿ ಆಟ ಬೇರೆ ಆಡ್ತೀಯಾ ?"

ಹಸಿದಿದ್ದ ವ್ಯಾಘ್ರ ಬೇಟೆಯ ಮೇಲೆ ಬಿತ್ತಂತೆ.

ಮಲಗಿದ್ದ ದಿನಕರ ಗಡಿಬಿಡಿಯಲ್ಲಿ ಎದ್ದಿದಾನೆ. ಹೊರಗಡೆ ಹಕ್ಕಿಯ ಚಿಲಿಚಿಲಿ ಆಗಲೇ ಪ್ರಾರಂಭವಾಗಿದೆ. ಬೆಳಗಿನ ಶೀತಲವಾತವರಣದ ಅನುಭವವನ್ನು ಮಲಗಿದ್ದಲ್ಲಿಯೇ ಮಾಡಿಕೊಂಡಿದ್ದಾನೆ ರಾಮಚಂಪ್ರಯ್ಯ. ಮುಚ್ಚಿದ ಕದ ಗಾಳಿಗೆ ತೆಗೆದುಕೊಂಡಿದೆ. ಬೆಳಕಿನ ಸೂರೆಯೋ ಸೂರೆ. ತಲೆ ಅಸಾಧ್ಯ ಸಿಡಿಯತೊಡಗಿದೆ. ಕಣ್ಣು ಬಿಡಬೇಕೆನಿಸಿದೆ.

ಬಿಡುವ ಹಾಗಿಲ್ಲ. ಸ್ವಲ್ಪ 'ಔಷಧಿ' ಕುಡಿದು ಮನೆಗೆ ಹೋಗಿಮಲಗಿದರೆ ವಾಸಿಯೇನೋ ಎನಿಸುತ್ತದೆ. ಮೆಲೆದ್ದು ಕೂರುತ್ತಾನೆ ಕಣ್ಣು ಬಿಡಬೇಕು. ಆಗುವುದೇ ಇಲ್ಲ. ಈಗ ಆಯಿತು.

ಕನಸಲ್ಲವಲ್ಲ ? ಕಂಡದ್ದೇನು ? ನಿಜವೇನು ? ಪುನಃ ಪುನಃ ಕಣ್ಣು ತಿಕ್ಕಿಕೊಂಡು ನೋಡುತ್ತಾನೆ. ಸಂಶಯವೇ ಇಲ್ಲ. ಏನು ?

ಮಲಗಿರುವುದು ಜಾನಕಿ. ರಾತ್ರಿ ಲಕ್ಷ್ಮೀ ಎಂದು ವರ್ತಿಸಿದ್ದು ಜಾನಕಿಯೊಂದಿಗೆ. ಲಕ್ಷ್ಮಿಯೆಲ್ಲಿ ? ಏಳು ಜಾನು ಮನೆಗೆ ಹೋಗೋಣ· ಜಾನಕಿಯನ್ನು ಮುಟ್ಟುತ್ತಾನೆ, ಮಂಜು !

ಮಂಜುಕೊರೆದಂತಾಯಿತು. ಕೈಅಲಗಿಸುತ್ತಾನೆ. ಮುಷ್ಠಿ ಹಿಡಿದಿದೆ.

ಬಲವಂತವಾಗಿ ಬಿಡಿಸಿ ನೋಡುತ್ತಾನೆ ಏನು ? ಹಿಂದಿಲದಿನ ಲಕ್ಷ್ಮಿಯು ಶೀಲಕ್ಕೆ ಬೆಲೆಕಟ್ಟಿಕೊಟ್ಟ ಐದು ರೂಪಾಯಿ. ಕಣ್ಣಿಗೆ ಕತ್ತಲೆಯ ದಾಳಿ.

"ಏಳು ಜಾನು ಹೋಗೋಣ"

ಜಾನು, ರಾಮಚಂದ್ರಯ್ಯನ ಜಾನು ಮಾತನಾಡಲಾರಳು. ಮಂಜುಗಡ್ಡೆ ನಿಶ್ಚಲವಾಗಿ ಬಿದ್ದಿದೆ. ನಡೆದ ಘಟನೆಗಳೆಲ್ಲ ಬುಗುರಿಯಂತೆ ಅವನ ಚಿತ್ತ ಪಥದಲ್ಲಿ ಗಿರಗಿರನೆ ಸುತ್ತತೊಡಗಿದೆ. ಕಣ್ಣೀರು ಕಾರಂಜಿಯಂತೆ ಉಕ್ಕತೊಡಗಿದೆ.

"ನಾನು ಪಾಪಿ. ಕ್ಷಮಿಸಿಬಿಡು ಜಾನಕಿ ಕ್ಷಮಿಸಿಬಿಡು.

ನಿಶ್ಚಲವಾಗಿ ಬಿದಿದ್ದ ಮಂಜಿನಗಡ್ಡೆಯ ಮೇಲೆ ಬಿದ್ದು ಅಳತೊಡಗಿದ್ದಾನೆ ರಾಮಚಂದ್ರಯ್ಯ. ಅದರ ತಂಪಿಗೆ ಅವನ ದೇಹದ ಕಾವೂ ಸಂಪೂರ್ಣವಾಗಿ ಆರಿ ಹೋದಂತೆ ಕಾಣುತ್ತದೆ.

# ರೂಪದರ್ಶಿ

"ಸಂಧ್ಯೆ ನಿಶೆಯಲ್ಲಿ ಐಕ್ಯವಾಗತೊಡಗಿದ್ದಾಳೆ. ದೇವಾಲಯದಲ್ಲಿ ಹಣತೆಯೊಂದು ಉರಿಯುತ್ತಿದೆ. ವೇಳೆಯ ಪರಿವೆಯೇ ಇಲ್ಲ. ಎರಡು ಜೀವಗಳು ಅಲೌಕಿಕ ಸೃಷ್ಟಿಯಲ್ಲಿ ಸಾಗಿವೆ. ಭಾನುವಿನ ಶಿಲ್ಪಕಾರ್ಯ ಮುಗಿದಂತೆ ಕಾಣುತ್ತದೆ. ಶಿಲಾಬಾಲಿಕೆಯ ಕಿರುಬೆರಳಿನ ರೂಪು ತಿದ್ದಿದರೆ ತೀರಿತು. ಭಾನು ಧನ್ಯನಾದಂತೆ. ಉದಯುಳ ಬೆರಳು ನೋಡುತ್ತಿದ್ದಾನೆ. ಕೈಯಲ್ಲಿ ಉಳಿ ಆಡುತ್ತಿದೆ ......"

೩

ನನ್ನನ್ನು ಮನ್ನಿಸಿಬಿಡಿ ಆಚಾರ್ಯ, ಮನ್ನಿಸಿಬಿಡಿ.

"ಆಗಿದ್ದಾದರೂ ಏನು ಭಾನು ?"

ತಮ್ಮ ಕಾಲನ್ನು ಬಲವಾಗಿ ಹಿಡಿದು ಅಡ್ಡ ಬಿದಿದ್ದ ಭಾನುವಿನ ತಲೆಯನ್ನು ಮಮತೆಯಿಂದ ನೇವರಿಸುತ್ತಾ ಕೇಳಿದರು ಆಚಾರ್ಯರು.

"ತಿಂಗಳ ದಿನದ ಹಿಂದೆ ಆಚಾರ್ಯರು ಕಲ್ಯಾಣಪುರದ ನರಸಿಂಗ ನಾಯಕರೊಡನೆ ಕಳುಹಿಸಿ, ಅಪ್ಪಣೆ ಮಾಡಿದ್ದರ ನೆನಪಿರಬಹುದು...."

"ಮರೆಯುವ ಸಂಗತಿಯೇನು ! ಕಾರ್ಯವೆಲ್ಲಾ ಸುಗಮವಾಗಿ ಮುಕ್ತಾಯವಾಗಿರಬಹುದಲ್ಲವೇ ?"

"ತಮ್ಮ ಅಪ್ಪಣೆಯಂತೆ ನರಸಿಂಗನಾಯಕರು ಕಟ್ಟಿಸಿರುವ ಆ ಭವ್ಯ ದೇಗುಲದ ದ್ವಾರದಲ್ಲಿ ಎರಡು ಪಕ್ಕಗಳಲ್ಲಿಯೂ ನೃತ್ಯ ಭಂಗಿಯ ಬಾಲೆಯರನ್ನು ಮೂಡಿಸಬೇಕೆಂದು ನಿಶ್ಚಯವಾಗಿತ್ತಷ್ಟೆ. ಆದರೆ ಪಕ್ಷಗಳು ಕಳೆದರೂ ಮನದಲ್ಲಿ ಮೂಡಿದ ಭಾವನೆಗಳು ಕೈಯಲ್ಲಿ ಸಾಗದಾಗಿವೆ. ಮನದಲ್ಲಿ ಪುಟಗೊಂಡು ಉರುಳುವ ಛಾಯೆಗಳನ್ನು ಹಿಡಿಯಲಾರದವನಾಗಿದ್ದೇನೆ. ಕೈಯಲ್ಲಿನ ಉಳಿ ಸಾಗುವುದೇ ಇಲ್ಲ. ನಿಂತಲ್ಲಿಯೇ ನಿಂತುಬಿಡುತ್ತದೆ. ಮನದಲ್ಲಿ ಬೇಕಾದಹಾಗೆ ರೂಪಿಸಿಕೊಂಡಿದ್ದೇನೆ. ಆದರೆ ಒಂದೂ ಸಾಗುವುದಿಲ್ಲ. ದೇವಸ್ಥಾನದಲ್ಲಿ ಭಗವಾನರ ಪ್ರತಿಷ್ಠಾಪನೆಯ ಕಾರ್ಯ ಮುಂದುವರಿಯುತ್ತಲೇ ಇದೆ. ಮುಂದಿನ ಪೌರ್ಣಿಮಿ ಶುಭದಿನವಾಗಿರುವುದರಿಂದ ಆ ವೇಳೆಗಾದರೂ ಮುಗಿಯದಿದ್ದರೆ ? ನನಗೆ ಏನೂ ತೋಚದಾಗಿದೆ ಆಚಾರ್ಯ."

ಶಾಂತಚಿತ್ತರಾಗಿ ಕೇಳುತ್ತಿದ್ದ ಆಚಾರ್ಯರು ಹೇಳಿದರು.

"ಭಗವಾನರನ್ನು ಏಕಾಗ್ರತೆಯಿಂದ ಸ್ಮರಿಸಿ ಮತ್ತೊಮ್ಮೆ ಪ್ರಯತ್ನಿಸಿ ನೋಡು ಭಾನು, ಸಾಧ್ಯವಾಗಬಹುದು."

"ಸಾಧ್ಯವಿಲ್ಲವಾಗಿದೆ ಆಚಾರ್ಯ. ಮನದಲ್ಲಿ ಮೂಡಿದುದು ಕೈಯಲ್ಲಿ ಆಡದಾಗಿದೆ. ತಮ್ಮ ಪ್ರತಿಷ್ಠೆಗೆ ನನ್ನಿಂದ ಮಹಾಪರಾಧವಾಗಿಬಿಟ್ಟಿದೆ."

"ಎಂತಹವರಿಗೂ ಒಮ್ಮೊಮ್ಮೆ ಹೀಗಾಗುವುದುಂಟು ಭಾನು. ಇದರಿಂದ, ಸತ್ವ ಪರೀಕ್ಷೆಯು ಕಾಲಸನ್ನಿಹಿತವಾಗಿದೆ ಎಂದು ಅರಿತುಕೊಳ್ಳಬಹುದು. ಇಲ್ಲಿ ಜಯಿಸಿದರೆ ಸಿದ್ಧಿ ದೊರಕಿದಂತೆಯೇ.

ಹೋಗು; ನಿನ್ನ ಕಾರ್ಯಕ್ಕೆ ರೂಪದರ್ಶಿಯೊಂದನ್ನು ಆಯ್ದುಕೊಂಡು, ಭಗವಾನರ ಕೈಂಕರ್ಯ ಮುಗಿಸು. ನಿನಗೆ ಶುಭವಾಗಲಿ, ಹೋಗಿ ಬಾ."

"ರೂಪದರ್ಶಿ !"

"ಹೌದು, ನಿನ್ನ ಮನದಲ್ಲಿ ಮೂಡಿದ ಕಲಾಕೃತಿಯ ಪ್ರತಿ ರೂಪವನ್ನು ಗುರುತಿಸಿ ನಿನ್ನ ಕಾರ್ಯ ನಿಮಿತ್ತವನ್ನಾಗಿ ಮಾಡಿಕೊ. ನಿನ್ನ ಚಿಂತನೆ ಶುಭ್ರವಾಗಿರಲಿ."

"ಧನ್ಯನಾದೆ ಗುರುವೆ, ಧನ್ಯನಾದೆ." ಆಚಾರ್ಯರಿಗೆ ಮತ್ತೊಮ್ಮೆ ಸಾಷ್ಟಾಂಗವಾಗಿ ನಮಸ್ಕರಿಸಿದ ಭಾನು ನಡೆದ.

೦ ೦ ೦ ೦

ಭಾನು, ಆಚಾರ್ಯರ ಶಿಷ್ಯ. ಅವನನ್ನು ಕಂಡರೆ ಆಚಾರ್ಯರಿಗೆ ಎಲ್ಲಿಲ್ಲದ ಪ್ರೀತಿ. ಮಮತೆ ಶಕ್ತಿಮೀರಿ ತಮ್ಮಲ್ಲಿದ್ದ ಅಪೂರ್ವ ವಿದ್ಯೆಯನ್ನು ಧಾರೆ ಎರೆದು ಕೃತಾರ್ಥರಾಗಿದ್ದರು.

ಆಚಾರ್ಯರ ಮತ್ತೊಂದು ಹೆಸರು ಶಿಲ್ಪಾಚಾರ್ಯ. ಅವರ ಅದ್ಭುತ ಕೈಚಳಕ ಎಂತಹವರನ್ನೂ ತನ್ಮಯಗೊಳಿಸುತಿತ್ತು. ಮೂಕರನ್ನಾಗಿಸುತಿತ್ತು; ಆಚಾರ್ಯರು ಉಳಿ ಹಿಡಿದರೆಂದರೆ ತೀರಿತು, ಎಲ್ಲಿಲ್ಲದ ತನ್ಮಯತೆ ಬರುತಿತ್ತು. ಕಾರ್ಯ ಮುಗಿಯುವವರೆಗೂ ಅದೇ ತನ್ಮಯತೆ ಅದೇ ಏಕಾಗ್ರತೆ. ಅವರ ಪ್ರತಿಯೊಂದು ಭಾಗವು ಸೂಕ್ಷ್ಮವಾಗಿ ಅಷ್ಟೇ ಜೀವಂತವಾಗಿ ಮೂಡಿ ಬರುತ್ತಿತ್ತು. ಕಲ್ಲಿನಲ್ಲಿ ಮೂಡಿಬಂದ ಅವು ಜೀವಂತವಾಗಿ

ಎದ್ದು ಬರುತ್ತವೋ ಎನ್ನುವ ಮಟ್ಟಿನ ನೈಜತೆ. ಅವರ ಕೀರ್ತಿ ಕೇಸರಿಯಂತೆ ನಾಡಿನಲೆಲ್ಲಾ ಪ್ರಸರಿಸಿತ್ತು.

ಹಿಂದಿನ ಮಾತು. ನರಸಿಂಗನಾಯಕರು ಪಟ್ಟಕ್ಕೆ ಬಂದ ಕಾಲ. ಹೊಸ ಅರಮನೆ ಕಟ್ಟಿ ಪೂರೈಸಿತ್ತು. ಭವ್ಯ ಅರಮನೆಯ ಮುಂದೆ ಪೂಜಾ ಗೃಹ ಒಂದನ್ನು ಕಟ್ಟಿಸಬೇಕೆಂದು ನಿಶ್ಚಯಿಸಿಕೊಂಡು, ಅದರಂತೆಯೇ ಮಾಡಿದರು. ಆದರೂ ನಾಯಕರಿಗೆ ಏನೋ ಕೊರತೆ, ಏನೊ ಅತೃಪ್ತಿ. ದೇಗುಲ ಸುಂದರವಾಗಿದ್ದರೂ ಅಷ್ಟು ಶೋಭೆಗೊಳ್ಳಲಿಲ್ಲವೆಂದೇ ನಾಯಕರ ಅಭಿಪ್ರಾಯ. ಊರಿನ ಹಿರಿಯ ನಾಲ್ಕಾರು ಜನರನ್ನು ಕರೆಸಿ ನಾಯಕರು ತಮ್ಮ ಸಂದೇಹ ವಿವರಿಸಿದರು. ಅವರ ಮಾತನ್ನು ಕೇಳಿದ ಹಿರಿಯರು ಹೇಳಿದರು.

"ಹೌದು ನಾಯಕರೇ, ದೇಗುಲವಿದ್ದೂ ದೇವರಿಲ್ಲವಾಗಿದೆ. ಎಷ್ಟು ಶೃಂಗರಿಸಿದರೂ ಶವಕ್ಕೆ ಸಿಂಗರಿಸಿದಂತೆ ಕಾಣುತ್ತದೆ."

"ಅದೇ ನನಗೂ ಯೋಚನೆಯಾಗಿದೆ."

"ಅಪ್ಪಣೆಯಾದರೆ ಒಂದು ಸಲಹೆಕೊಡ ಬಯಸುತ್ತೇನೆ" ಬಂದಿದ್ದವರಲ್ಲಿ ಒಬ್ಬರೆಂದರು :

"ಅಗತ್ಯವಾಗಿ ಕೊಡಿ. ಏನೇ ಆದರೂ ಆ ಪೂಜಾಗೃಹ ಶೋಭೆಗೊಳ್ಳಬೇಕು. ತಪ್ತನಾದ ಮನಕ್ಕೆ ಅಲ್ಲಿ ಶಾಂತಿದೊರಕುವಂತಹ ಪ್ರಕೃತಿ ಸಿದ್ಧವಾಗಬೇಕು. ಅದಕ್ಕೆ ಏನು ಬೇಕಾದರೂ ಮಾಡಲು ಸಿದ್ಧನಾಗಿದ್ದೇನೆ, ಅಪ್ಪಣೆಕೊಡಿಸಬೇಕು."

"ಬೋರೆಯಲ್ಲಿ ಶಿಲ್ಪಾಚಾರ್ಯ ಎಂಬ ಮಹಾ ಶಿಲ್ಪಿಗಳೊಬ್ಬರಿದ್ದಾರೆ' ಅವರನ್ನು ಹೇಗಾದರೂ ಮಾಡಿ ನಿಮ್ಮ ಈ ಕಾರ್ಯಕ್ಕೆ ಒಪ್ಪಿಸಿಕೊಳ್ಳಿ. ಆಗ ಭಗವಾನರ ನಿವಾಸ, ಭಕ್ತರ ಬೀಡಾಗುತ್ತದೆ. ಕಲಾಮೂರ್ತಿ ಜೀವಂತವಾಗಿ ಉದಯಿಸುತ್ತವೆ. ಅವರು ಒಪ್ಪುವುದು ಕಷ್ಟ. ಒಪ್ಪಿಕೊಂಡರೇ ಭಗವಾನರು ಪ್ರಸನ್ನರಾದಂತೆಯೇ."

"ಅವರ ಪ್ರತಿಭೆ ಅಷ್ಟರ ಮಟ್ಟಿನದೇನು ?"

–ವಿಸ್ಮಯವಾಗಿಕೇಳಿದರು ನಾಯಕರು,

"ಹೌದು ನಾಯಕರೆ, ಅವರ ಪ್ರತಿಭೆ ಅಳೆಯಲು ಸಾಮಾನ್ಯರಾದ

ನಮ್ಮ ಕೈಯಲ್ಲಿ ಸಾಧ್ಯವಿಲ್ಲ ಪ್ರಾಯಶಃ ಆ ಸೃಷ್ಟಿದಾತನಿಂದಲೂ ಆಗುವುದೋ ಇಲ್ಲವೋ ಕಾಣೆ."

"ಬಹಳ ಉಪಕಾರವಾಯಿತು ಪೂಜ್ಯರೇ, ಇಂದೇ ಆ ಮಹಾನುಭಾವರ ಸನ್ನಿಧಾನಕ್ಕೆ ತೆರಳಿ ವಿಜ್ಞಾಪಿಸಿಕೊಂಡು ಹೇಗಾದರೂ ಮಾಡಿ ಕರೆತರುತ್ತೇನೆ."

ಹಿರಿಯರ ಮಾತು ಕೇಳಿದ ನರಸಿಂಗನಾಯಕರು ವಿಳಂಬ ಮಾಡದೆ ಆಚಾರ್ಯರಲ್ಲಿಗೆ ಧಾವಿಸಿದರು. ನರಸಿಂಗನಾಯಕರ ಮಾತನ್ನು ಸಾವಧಾನವಾಗಿ ಕೇಳಿದ ಆಚಾರ್ಯರು ನಕ್ಕು ಹೇಳಿದರು,

"ನಾಯಕರು ನಮ್ಮ ಮೇಲೆ ತೋರಿಸಿದ ಅಭಿಮಾನಕ್ಕೆ ಧನ್ಯ. ಆದರೆ ಪ್ರಾಯ ಸಂದು ಹೋಗಿದೆ. ಚಿತ್ತ ಸ್ವಾಸ್ತ್ಯವಿಲ್ಲ ನಿಂತಲ್ಲಿ ನಿಲ್ಲಲಾರೆ, ಕೂತಲ್ಲಿ ಕೂರಲಾರೆ, ದೃಷ್ಟಿ ಮುಸುಕಾಗಿ ಬಿಟ್ಟಿದೆ. ಹೀಗಿರುವಾಗ ಇಂತಹ ಮಹಾಕಾರ್ಯ ನನ್ನಿಂದ ಸಾಧ್ಯವೇ ಎಂದು ಯೋಚಿಸುತ್ತಿದ್ದೇನೆ.

"ನನ್ನ ಬಿನ್ನಹವನ್ನು ಮನ್ನಿಸಿ ಬರಬೇಕು ಆಚಾರ್ಯ. ಇಲ್ಲವಾದರೆ ನನ್ನ ಕಾರ್ಯವೆಲ್ಲವೂ ನೀರಿನಲ್ಲಿ ಮಾಡಿದ ಹೋಮದಂತೆ. ಭಕ್ತಕೋಟಿ ನಿಮ್ಮ ಅನುಗ್ರಹಕ್ಕಾಗಿ ತಪಿಸುತ್ತಿದೆ. ಇದಕ್ಕೆ ಎಷ್ಟು ಖರ್ಚಾದರೂ ಸರಿಯೇ ಅರ್ಪಿಸಲು ನಿರ್ಧರಿಸಿದ್ದೇನೆ." ಆಚಾರ್ಯರೂ ಎಲ್ಲಿ ಆಗುವುದಿಲ್ಲ ಎಂದು ಬಿಡುತ್ತಾರೆಯೋ ಎಂದು ಗಾಬರಿಗೊಂಡ ನಾಯಕರು ಮತ್ತೆ ಕೇಳಿಕೊಂಡರು.

"ನನ್ನಿಂದಲೇ ಆ ಪರಮಾತ್ಮ, ಸೇವೆ ತೆಗೆದುಕೊಳ್ಳಬೇಕೆಂದು ಸಂಕಲ್ಪಿದ್ದರೆ ಕೈ ಹಿಡಿದು ನಡೆಸಿಕೊಳ್ಳುತಾನೆ. ಅದನ್ನು ತಡೆಯಲು ನಾನಾರು? ಸೂತ್ರಧಾರ ಅವನು, ಬೊಂಬೆಗಳು ನಾವು. ಪ್ರಾಣ ಇರುವವರೆಗೂ ಆಡಿಬಿಡುವುದು. ಬರುತ್ತೇನೆ ನಡೆಯಿರಿ."

"ನನ್ನ ಜನ್ಮ ಇಂದಿಗೆ ಪಾವನವಾಯಿತು ಆಚಾರ್ಯ." ಶಿಲ್ಪಾಚಾರ್ಯರ ಕಾಲು ಹಿಡಿದು ಸಾಷ್ಟಾಂಗವಾಗಿ ನಮಸ್ಕರಿಸಿದರು ನಾಯಕರು. ಅತಿರೇಕವಾದ ಆನಂದದಿಂದ ಅವರ ಕಣ್ಣಿನಲ್ಲಿ . ಹನಿ ತೊಟ್ಟಿಕ್ಕಿದ್ದವು.

ಶಿಲ್ಪ ಕಾರ್ಯಕ್ಕೆ ಆಚಾರ್ಯರು ಒಪ್ಪಿಕೊಂಡದನ್ನು ಕೇಳಿಯೇ ಊರಿನವರಿಗೆ ಎಲ್ಲಿಲ್ಲದ ಸಂತಸ; ಸಂಭ್ರಮವಾಗಿತ್ತು. ಅವರು ಕಾರ್ಯಕ್ಕೆ

ಸ್ವಲ್ಪವೂ ಅನಾನುಕೂಲವಾಗದಂತೆ ಸಮಸ್ತ ಸೌಕರ್ಯವನ್ನೂ ಕಲ್ಪಿಸಿ ಕೊಟ್ಟು, ವಾಸಕ್ಕಾಗಿ ಒಂದು ಸೌಧವನ್ನು ತೆರವು ಮಾಡಿದರು.

"ಆಚಾರ್ಯರಿಗೆ ಏನು ಕೊರತೆಯಾಗಬಾರದು. ಏನಾದರೂ ಅಗತ್ಯ ಕಂಡುಬಂದಲ್ಲಿ ಕೂಡಲೇ ಅಪ್ಪಣೆ ಮಾಡುವುದು. ಸನ್ನಿಧಾನದ ಸೇವೆಗೆ ಸದಾಸಿದ್ಧನಿದ್ದೇನೆ." ನಮ್ರನಾಗಿ ಆಚಾರ್ಯರಿಗೆ ವಿಜ್ಞಾಪಿಸಿಕೊಂಡರು ನಾಯಕರು.

ತಮಗಾಗಿ ಆಗಿದ್ದ ಏರ್ಪಾಡಗಳನ್ನು ಸೌಧವನ್ನು ಕಂಡು ಮುಗುಳು ನಕ್ಕು ಕೇಳಿದರು ಆಚಾರ್ಯರು. "ಇಷ್ಟೇ ಏನು ನಾಯಕರೇ ನಿಮ್ಮ ಏರ್ಪಾಡು?"

ನಾಯಕರು ಬೆಚ್ಚಿಬಿದ್ದರು. ತಮ್ಮ ಅಂತಸ್ಥಿಗೆ ಮೀರಿ ಏರ್ಪಡಿಸಿದ್ದರೂ ಆಚಾರ್ಯರಿಗೆ ಸಮಾಧಾನವಾಗಲಿಲ್ಲವಲ್ಲ ಎಂದು ಖೇದವಾಯಿತು.

"ಅಲ್ಪ ಬುದ್ಧಿಗೆ ಅರಿವಾಗದೆ ಏನಾದರೂ ಅಪಚಾರವಾಗಿದ್ದಿರಬಹುದು ಆರ್ಯ. ಮನ್ನಿಸಿ ಅಪ್ಪಣೆ ಕೊಡಿಸಿದಲ್ಲಿ ತಕ್ಷಣವೇ...."

"ಹ್ಹ... ಹ್ಹ..... ನಿಮ್ಮ ಏರ್ಪಾಡು ನನಗೊಂದು ಸಾಲುವುದಿಲ್ಲ ನಾಯಕರೇ."

"ಏನಾಗಬೇಕು, ಅಪ್ಪಣೆಯಾಗಲಿ"

"ಏನಾಗಬೇಕು? ಗಾಬರಿ ಬೀಳಬೇಡಿ ನಾಯಕರೇ ನನಗೇಕೆ ಈ ಸೌಧ ಈ ರಾಜಬೋಗ. ದೇಗುಲದ ಎದುರು ಒಂದು ಗುಡಿಸಲು ಹಾಕಿಕೊಟ್ಟು ಬಿಡಿ, ನಾನು ಕಾರ್ಯ ಮುಗಿಯಿತು ಎಂದು ಹೇಳುವವರೆಗೂ ಅಲ್ಲಿಗೆ ಯಾರೂ ಬರಕೂಡದು. ಗುಡಿಯ ಸುತ್ತಲೂ ತಡಿಕೆ ಕಟ್ಟಿಸಿಬಿಡಿ."

"ಎಲ್ಲಿಯಾದರೂ ಉಂಟೆ ಆಚಾರ್ಯ? ಸೌಧದಲ್ಲಿ ಇರಬಹುದಲ್ಲ. ದೇವಸ್ಥಾನದ ಸುತ್ತಲೂ ತಡಿಕೆ ಹಾಕಿಸುತ್ತೇನೆ. ತಮ್ಮ ಅಪ್ಪಣೆಯಾಗುವವರೆಗೂ ಅತ್ತ ಯಾರು ಸುಳಿಯಕೂಡದಾಗಿ ವಿಧಿಸುತೇನೆ"

"ನನಗೆ ಗುಡಿಸಲು ಹಾಕಿಕೊಡಿ ಈ ವಿಚಾರದಲ್ಲಿ ಮತ್ತೆ ಒತ್ತಾಯ ಬೇಡ. ಮತ್ತೊಂದು ಸಂಗತಿ ಈ ಕಾರ್ಯಕ್ಕೆ ನಿಮ್ಮಿಂದ ಏನಾದರೂ ಅಪೇಕ್ಷಿಸುತ್ತಿದ್ದೇನೆ ಎಂದು ತಿಳಿದಿದ್ದಲ್ಲಿ ಅದು ತಪ್ಪು ಅಭಿಪ್ರಾಯ. ಕಟ್ಟಕಡೆಯ

ದಾಗಿ ಭಗವಾನರ ಸೇವೆ ಸಾಧ್ಯವೇ ಎಂದು ಪ್ರಯತ್ನಿಸಲು ಬಂದಿದ್ದೇನೆ. ತಿಳಿಯಿತೇ ನಾಯಕರೇ ?"

"ಅಪ್ಪಣೆ"

ದೇವಸ್ಥಾನದ ಸುತ್ತಲೂ ತಡಿಕೆ ಹಾಕಿಯಾಗಿದೆ. ಅದರ ಎದುರು ಚಿಕ್ಕದೊಂದು ಗುಡಿಸಲು. ಅದು ಆಚಾರ್ಯರ ನಿವಾಸ. ಆಚಾರ್ಯರ ಕಾರ್ಯಕ್ಕೆ ಇದೇ ವೇಳೆಯೆಂದಿಲ್ಲ. ಒಮ್ಮೊಮ್ಮೆ ಎಡೆಬಿಡದೆ ಶಿಲ್ಪಕಾರ್ಯ ಸಾಗುತ್ತದೆ. ಮತ್ತೊಮ್ಮೆ ಹಲವು ದಿನಗಳಾದರೂ ಉಳಿಯನ್ನು ಮುಟ್ಟುವುದೇ ಇಲ್ಲ. ಯೋಚಿಸುತಲೇ ಕುಳಿತುಬಿಡುತ್ತಾರೆ. ಬೇಸರವಾದಾಗ ಬೋರೆಯ ಕಡೆ ನಡೆಯತೊಡಗುತ್ತಾರೆ. ಕಾಲು ನೋಯತೊಡಗಿದಾಗ ಹಿಂದಲ ದಾರಿ ಹಿಡಿಯುವುದು.

ಯಾರೂ ದೇವಸ್ಥಾನದತ್ತ ಹೋಗುವಂತಿಲ್ಲ. ನಾಯಕರ ಕಟ್ಟಾಜ್ಞೆಯಾಗಿದೆ. ಸ್ವತಃ ನಾಯಕರೇ ಹೋಗುವಂತಿಲ್ಲ. ಆದರೂ ಎಷ್ಟರಮಟ್ಟಿಗೆ ಕಾರ್ಯವಾಗುತಿದೆ ಎಂದು ಅರಿಯುವ ಕುತೂಹಲ.

ದೇವಸ್ಥಾನದಲ್ಲಿನ ಕಾರ್ಯ ಪ್ರಾರಂಭವಾಗಿ ಐದು ಋತುಗಳಾದರೂ ಆಚಾರ್ಯರಿಂದ ಮುಗಿಯಿತೆನ್ನುವ ಸುದ್ದಿಯಿಲ್ಲ.

ಅಂದಿಗೆ ಕಾರ್ಯಪ್ರಾರಂಭವಾಗಿ ಒಂದು ಸಂವತ್ಸರ ಕಳೆದಿದೆ. ಆಚಾರ್ಯರು ದೇವಸ್ಥಾನದ ಮುಕ್ತಾಯ ಘಟ್ಟದ ಯೋಚನೆಯಲ್ಲಿದ್ದಾರೆ. ಪ್ರಾಕಾರದಲ್ಲಿ ನೃತ್ಯಭಂಗಿಯಲ್ಲಿ ನಿಂತಿರುವ ಬಾಲೆಯರ ಜನ್ಮ ರೂಪುಗೊಳ್ಳುತಿದೆ. ಮೈಮೇಲೆ ಪ್ರಜ್ಞೆ ಇದ್ದಂತೆಯೇ ಇಲ್ಲ ಆಚಾರ್ಯರಿಗೆ. ಸಾಗುತಲೇ ಇದೆ. ಸಂವತ್ಸರ ಕಳೆದರೂ ಆಚಾರ್ಯರಿಂದ ಉತ್ತರ ಬಾರದ್ದನ್ನು ಕಂಡು ನರಸಿಂಗನಾಯಕರಿಗೆ ಅನುಮಾನವಾಗ ತೊಡಗಿದೆ. ವೃಥಾ ಕಾಲ ಕಳೆಯುತಿದ್ದಾರೆಯೋ ಎಂಬ ಅನುಮಾನ ಅವರ ಮನವನ್ನು ಹುಳು ಕೊರೆದಂತೆ ಕೊರೆಯತೊಡಗಿದೆ. ಭಗವಾನರ ಪ್ರತಿಷ್ಠಾಪನೆಯ ಕಾರ್ಯ ಮುಂದೂಡಿ ಬೇಸತ್ತು ಹೋಗಿದ್ದಾರೆ.

ಹೇಗಾದರೂ ಆಗಲಿ ಒಮ್ಮೆ ಹೋಗಿ ಪರೀಕ್ಷಿಸಿ ನೋಡಬೇಕೆಂಬ ಬಯಕೆಯನ್ನು ಹತ್ತಿಕ್ಕಲಾರದೆ ನಾಯಕರು, ಅಂದು ಮುಂಜಾವು ಎದ್ದವರೇ ದೇವಸ್ಥಾನದತ್ತ ಹೆಜ್ಜೆ ಹಾಕಿದರು. ದೃಢವಾಗಿ ಇಡುತಿದ್ದ ಹೆಜ್ಜೆಗಳಾ

ದರೂ ನಡುಗುತ್ತಿದ್ದಂತೆ ಭಾಸವಾಯಿತು. ಅದಾವುದನ್ನೂ ಗಣನೆಗೆ ತಾರದೆ ನಾಯಕರು ಮಾರ್ಗದಲ್ಲಿ ಸಾಗಿಯೇ ಇದ್ದರು.

ಹಣತೆಯೊಂದು ಇನ್ನೂ ಉರಿಯತೊಡಗಿದೆ. ತನ್ಮಯತೆಯಿಂದ ಆಚಾರ್ಯರ ಕಾರ್ಯಸಾಗುತಿದೆ. ಆ ಮಂದ ಬೆಳಕಿನಲ್ಲಿಯು ಕೈಯಲ್ಲಿ ಹಿಡಿದಿದ್ದ ಉಳಿ ಮಿರುಗುತ್ತಿದೆ. ಸಂವತ್ಸರದಿಂದಲೂ ಯಾರು ಅತ್ತ ಬರಬಾರದೆಂದು ವಿಧಿಸಿದ್ದ ಕಾರಣ ಕಸ ಗುಡ್ಡೆ ಗುಡ್ಡೆಯಾಗಿ ಬಿದ್ದಿದೆ. ಎಲ್ಲವೂ ಚೆಲ್ಲಾಪಿಲ್ಲಿಯಾಗಿವೆ. ನೀರವತೆ ನಿಬ್ಬೆರಗಾಗಿ ಲಾಗ ಹಾಕ ತೊಡಗಿದೆ

ಅದನ್ನೆಲ್ಲ ಕಂಡು ನರಸಿಂಗನಾಯಕರರಕ್ತ ಕುದಿಯತೊಡಗಿತು. ಅದ್ಭುತ ದೇವಸ್ಥಾನ ಕಟ್ಟಿಸಿದರೂ. ದೈವಪ್ರತಿಷ್ಠಾಪನೆಗೆ ಅವಕಾಶಕೊಡದಂತೆ ನೆವವೊಡ್ಡಿ ಹಾಳು ಕೊಂಪೆಯನ್ನಾಗಿ ಮಾಡಿರುವ ಆಚಾರ್ಯರನ್ನು ಸರಿಯಾಗಿ ತರಾಟಿಗೆ ತೆಗೆದುಕೊಳ್ಳಬೇಕೆಂದು ತೀರ್ಮಾನಿಸಿಕೊಂಡು ದೇವಸ್ಥಾನದ ಬಾಗಿಲಿಗೆ ಬಂದುನಿಂತ ನಾಯಕರು ಯಾವುದನ್ನೂ ಗಮನಿಸದೆ ಕೂಗಿದರು.

"ಆಚಾರ್ಯರೇ...."

"ಟಣ........ಟಣ್........" ಕಲ್ಲೂ, ಉಳಿಯ ತಗುಲುವಿಕೆಯಿಂದ ಉಂಟಾದ ನಿನಾದ. ಆಚಾರ್ಯರ ಕಾರ್ಯ ಸಾಗಿಯೇ ಇದೆ.

'ಆಚಾರ್ಯರೇ....s....s" ಸ್ವಲ್ಪ ಮುಂದೆ ಬಂದು ಮತ್ತೆ ಗಟ್ಟಿಯಾಗಿ ಕೂಗಿದರು ನರಸಿಂಗನಾಯಕರು.

ಇಲ್ಲ. ಉತ್ತರವಿಲ್ಲ. ಆಚಾರ್ಯರು ತನ್ಮಯತೆಯಲ್ಲಿ ತೂಗುಯ್ಯಾಲೆ ಯಾಡುತಿದ್ದಾರೆ.

"ಸ್ವಾಮಿ ಆಚಾರ್ಯರೇ ಏನು ಮಾಡುತಿದ್ದೀರಿ? ಹೊರಗೆಲ್ಲಾ ಹಾಳು ಕೊಂಪೆಯಂತಾಗಿಬಿಟ್ಟಿದೆಯಲ್ಲಾ."

ಈಗ ನಾಯಕರ ಧ್ವನಿ ತಾರಕ ಸ್ವರಕ್ಕೇರಿದೆ. ಒಮ್ಮೆಯೇ ಶಬ್ದ ಕೇಳಿ ಬೆಚ್ಚಿದ ಆಚಾರ್ಯರ ಹಿಡಿತ ತಪ್ಪಿದ ಉಳಿ, ರೂಪಿಸುತಿದ್ದ ಶಿಲಾ ಬಾಲಕಿಯ ನಾಸಿಕವನ್ನು ತುಂಡರಿಸಿಬಿಟ್ಟಿತು. ಏನು ಸಂಗತಿ ಎಂದು ತಿಳಿಯುವ ಮುನ್ನವೇ ಕೈ ಮಿಂಚಿತು.

"ಅಯ್ಯೋ....ಭಗವನ್...."ಒರಲಿದ ಆಚಾರ್ಯರು ಹಾಗೆಯೇ ಒರಗಿದರು.

ಒಳಕ್ಕೆ ಬಂದ ನಾಯಕರು ನೋಡುತ್ತಾರೆ! ಕಲಾ ಪ್ರವಾಹವೇ ಭೋರ್ಗರೆಯತೊಡಗಿದಂತಿದೆ. ಎಲ್ಲವೂ ಜೀವಂತವಾಗಿ ಎದ್ದು ಬರುವಂತಿದೆ ಅದನ್ನು ಕಂಡ ನಾಯಕರು ಮೂಕರಾಗಿಬಿಟ್ಟಿದ್ದಾರೆ. ಅವರ ಕಣ್ಣಿನಲ್ಲಿ ಆನಂದಬಾಷ್ಪ ತುಂಬಿ ಹರಿಯುತ್ತಿದೆ. ಹೃದಯ ಸಂತಸದಿಂದ ಕುಣಿಯತೊಡಗಿದೆ.

ಆವೇಗದಿಂದ ಬಂದು, ಆಚಾರ್ಯರ ಕಾಲು ಹಿಡಿಯುತ್ತಾರೆ.

ಎಚ್ಚೆತ್ತ ಆಚಾರ್ಯರು ಕಾಲು ಝಾಡಿಸಿ ಹಿಂದೆ ಸರಿದರು. ಪೆಟ್ಟಬಿದ್ದ ನಾಯಕರು ದೈನ್ಯದಿಂದ ಅವರ ಮುಖವನ್ನೆ ದಿಟ್ಟಿಸತೊಡಗಿದರು. ಆಚಾರ್ಯರ ಕಣ್ಣು ಪ್ರಜ್ವಲಿಸತೊಡಗಿದವು.

ಕಾರ್ಯ ಮುಗಿಯುವ ಮುನ್ನವೇ ಬರಬಾರದೆಂದಿದ್ದನಲ್ಲವೆ ?"

"ಹೌದು ಆರ್ಯ"

"ಬಂದಿದ್ದೇಕೆ ?"

"ಹತ್ತಿಕ್ಕಲಾರದ ಕಾತುರ ನನ್ನನ್ನಾವರಿಸಿಬಿಟ್ಟಿತು ಆಚಾರ್ಯ, ಮನ್ನಿಸಿ ಉದ್ಧರಿಸಬೇಕು."

"ಇಲ್ಲಿ ನೋಡು, ಏನಾಗಿದೆ. ಮೂಗು ಮುರಿದ ಬಾಲಕಿಯತ್ತ ಕೈ ಮಾಡಿ ತೋರಿಸುತ್ತಾ ಆಚಾರ್ಯರು ಹೇಳಿದರು.

"ಅನಂತ ಅಪರಾಧ ಮಾಡಿದ್ದೇನೆ. ಆಚಾರ್ಯ, ಕ್ಷಮಿಸಿಬಿಡಿ" ಎಂದು ಹೇಳಿದ ನಾಯಕರು ಕಾಲಿಗೆರಗಿದರು.

"ಇಲ್ಲ ನನ್ನಿಂದ ಇನ್ನು ಮುಂದುವರಿಸಲು ಸಾಧ್ಯವೇ ಇಲ್ಲ. ನನ್ನ ಸೇವಾಕಾರ್ಯ ಮುಕ್ತಾಯಗೊಂಡಿದೆ" ಎನ್ನುತ ಉಳಿಯನ್ನು ಕೆಳಕ್ಕೆ ಹಾಕಿಬಿಟ್ಟರು.

"ತಪ್ಪನು ಉಡಿಯಲ್ಲಿ ಹಾಕಿ ಕಾರ್ಯ ಮುಂದುವರೆಸಿಕೊಡಬೇಕು. ತಾವು ಸಾಧ್ಯವಿಲ್ಲವೆಂದರೆ ಮತ್ತೆ ಅದು ಯಾರಿಂದ ಸಾಧ್ಯ ? ಈ ಭವ್ಯ ಕಲಾ ಶರಧಿ ನಿಮ್ಮಿಂದ ಪೂರ್ಣಗೊಳಬೇಕು ಆಚಾರ್ಯ"

ಒಮ್ಮೆ ಸಾಧ್ಯವಿಲ್ಲವೆಂದು ಹೇಳಿ, ಉಳಿ ಕೆಳಗೆ ಹಾಕಿದ ಮೇಲೆ ಮುಗಿಯಿತು. ನಾಯಕರೇ, ಮತ್ತೆ ಮುಟ್ಟಲು ಸಾಧ್ಯವೇ ಇಲ್ಲ."

"ಆರ್ಯ ಅನುಗ್ರಹಿಸಿ. ನಾಯಕರು ಆಚಾರ್ಯರ ಕಾಲು ಹಿಡಿದು ಬಿಟ್ಟರು.

"ಏಳಿ ನಾಯಕರೆ, ನನ್ನ ದುಡುಕಿಗೆ, ನನಗೆ ನಾಚಿಕೆಯಾಗುತ್ತಿದೆ. ಆದರೆ ಏನು ಮಾಡುವಂತಿಲ್ಲ, ಎಲ್ಲವೂ ಕೈಮಿಂಚಿ ಹೋಗಿದೆ."

"ಸಾಧ್ಯವೇ ಇಲ್ಲ, ಆಚಾರ್ಯ, ಅನುಗ್ರಹಿಸಿದ ಹೊರತು ಕೈ ಬಿಡಲಾರೆ."

"ದೈವಾನುಗ್ರಹವಿದ್ದರೆ ಕಾರ್ಯ ಸಂಪೂರ್ಣಗೊಳ್ಳುತ್ತದೆ, ಏಳಿ."

"ನಿಜವಾಗಿಯೂ !"

ಸಂವತ್ಸರದ ಮೇಲೆ ಸಂವತ್ಸರ ಬಂದು ಹೋದರೂ ದೇವರ ಪ್ರತಿಷ್ಠಾಪನೆಯಾಗದೆ ದೇವಾಲಯ ಜೂಗುಟ್ಟತೊಡಗಿದೆ. ತಮ್ಮ ದುಡುಕಿಗೆ ಆಚಾರ್ಯರು ತಪ್ತರಾಗುತ್ತಿದ್ದಾರೆ. ಒಂದು ದಿನ, ಸುಪ್ರಭಾತ ಸಮಯ ಆಚಾರ್ಯರು ಪ್ರಾತಃಕಾಲದ ವಿಧಿಯುತ್ತ ನಿರತರಾಗಿದ್ದಾರೆ. ಹೊರಗಡೆಯಿಂದ ಅಳುವ ಸದ್ದು ಕೇಳಿಬರುತ್ತಿದೆ. ಬರಬರುತ್ತ ಅದು ಸ್ಪಷ್ಟವಾಗಿ ಕೇಳಿಬರುತ್ತಿದೆ. ಹೊರಗೆ ಬಂದ ಆಚಾರ್ಯರು ನೋಡುತ್ತಾರೆ. ಸುಮಾರು ನಾಲ್ಕೈದರ ಪ್ರಾಯದ ಬಾಲಕ ಅಳುತ್ತಲೇ ನೆಂದ ಮಣ್ಣಿನಲ್ಲಿ ಉಂಡೆ ಕಲಸಿಕೊಂಡು ಬೊಂಬೆ ಮಾಡುತ್ತಿದ್ದಾನೆ. ಅದನ್ನು ಕಂಡು ಆಚಾರ್ಯರು ಪುಳಕಿತಗೊಂಡರು. ಸಂಭ್ರಮ ಹೊಂದಿದರು.

"ನನ್ನ ತಪ್ಪು ಮನ್ನಿಸಿದೆಯಾ ಒಡೆಯಾ. ಬಹಳ ದಿನ ಕಾಯಿಸಿ ಬಿಟ್ಟೆಯಲ್ಲ ತಂದೆ." ಎನ್ನುತ್ತ ಮಗುವಿದ್ದಲ್ಲಿಗೆ ಧಾವಿಸಿ, ಎತ್ತಿಕೊಂಡು ಒಳ ನಡೆದರು.

"ಭಾನು."

ಅವನನ್ನು ಪ್ರೀತಿಯಿಂದ ಕೂಗುತ್ತಾರೆ ಆಚಾರ್ಯರು. ಭಾನುವಿನದು ಅಸಾಧ್ಯ ನೈಪುಣ್ಯ. ತಮ್ಮಲ್ಲಿಯ ಸಮಸ್ತ ವಿದ್ಯೆಯನ್ನು ಧಾರೆ ಎರೆಯತೊಡಗುತ್ತಾರೆ. ಸ್ವಲ್ಪವೂ ವಿಳಂಬವಿಲ್ಲದೆ ಗ್ರಹಿಸಿಕೊಳ್ಳುತ್ತಿದ್ದಾನೆ ಭಾನು.

ಹದಿನಾರು ಸಂವತ್ಸರ ಕಳೆದು ಹೋಗಿದೆ. ಭಾನು ಈಗ ಪ್ರಬುದ್ಧ ನಾಗಿದ್ದಾನೆ. ಗುರುವನ್ನು ಮೀರಿಸುವ ಕೌಶಲ್ಯ ಸಂಪಾದಿಸಿಕೊಂಡಿದ್ದಾನೆ.

ಪಕ್ಕದಲ್ಲಿ ಕುಳಿತು ಗಾಳಿ ಹಾಕುತ್ತಿದ್ದ ಭಾನುವಿಗೆ ಆಚಾರ್ಯರು ಒಮ್ಮೆ ಹೇಳುತ್ತಾರೆ.

"ಭಾನು"

"ಆರ್ಯ"

"ನಾನು ಹೇಳಿಕೊಡಬೇಕಾದುದೆಲ್ಲವೂ ಮುಕ್ತಾಯಗೊಂಡಿತು."

"ಅಂದರೇ ?"

"ಇನ್ನು ರಾಷ್ಟ್ರಕಲ್ಯಾಣಕ್ಕಾಗಿ ನಿನ್ನ ವಿದ್ಯೆಯನ್ನು ಸಾರ್ಥಕಪಡಿಸಿಕೊಳ್ಳಬೇಕಾಗಿದೆ ನೀನು ಮಾಡಬೇಕಾದ ಮೊದಲ ಕರ್ತವ್ಯ ಇದು. ರಾಜ್ಯದ ನಾಯಕರಾದ ನರಸಿಂಗನಾಯಕರಲ್ಲಿಗೆ ತೆರಳಿ ಅಪೂರ್ಣಗೊಂಡಿರುವ ಕಾರ್ಯವನ್ನು ಪೂರ್ಣಗೊಳಿಸಿ ಭಗವಾನರನ್ನು ಪ್ರತಿಷ್ಠಾಪಿಸಿ ಬಾ. ಈ ಕಾರ್ಯ ಮುಂದಿನ ಪೌರ್ಣಮಿಯಲ್ಲಿ ಆಗಬೇಕು."

"ಅನುಜ್ಞೆ ಆಚಾರ್ಯ"

ಭಾನು ಗುರುವಿನಾಜ್ಞೆಯಂತೆ ನಾಯಕರಲ್ಲಿಗೆ ನಡೆದಿದ್ದ.

"ರೂಪದರ್ಶಿ"

ಆಚಾರ್ಯ ಹೇಳಿದ ಮಾತು ಇನ್ನೂ ಭಾನುವಿನ ಕಿವಿಯಲ್ಲಿ ರಿಂಗಣ ಮಾಡುತ್ತಿತ್ತು.

"ನಿನ್ನ ಮನದಲ್ಲಿ ಮೂಡಿದ ಕಲಾಕೃತಿಯ ಪ್ರತಿರೂಪವನ್ನು ಗುರುತಿಸಿ, ನಿನ್ನ ಕಾರ್ಯನಿಮಿತ್ತವನ್ನಾಗಿಸಿಕೊ. ನಿನ್ನ ಚಿಂತನೆ ಶುಭ್ರವಾಗಿರಲಿ"

"ಈ ರೂಪದರ್ಶಿಗೆ ಎಲ್ಲಿ ಹುಡುಕಲಿ" ಚಿಂತಿಸುತ್ತಾ ಭಾನು ಅರಮನೆಯ ತೋಟದಲ್ಲಿ ಕುಳಿತಿದ್ದ. ಹೊತ್ತು ಮೂಡಿ ಬಹಳ ಸಮಯವಾಗಿದ್ದರೂ ಮಂಜು ಸಣ್ಣಗೆ ಬೀಳುತ್ತಲೇ ಇತ್ತು. ನಾಯಕರ ಕುವರಿ

3

ಉದಯ ಕೈಯಲ್ಲಿ ಬ ಟ್ಟೆಹಿಡಿದುಕೊಂಡು ಕೋಟೆದ ಒಳಗೆ ಸಾಗಿದ್ದಳು. ಅವಳ ಉದ್ದನಾದ ಕೇಶರಾಶಿ ಗಾಳಿಯಲ್ಲಿ ನಾಟ್ಯವಾಡತೊಡಗಿತ್ತು. ಹಂಸ ದಂತೆ ಸಾಗಿತ್ತು ಅವಳ ನಡಿಗೆ.

ಭಾನು ಅವಳನ್ನು ನೋಡಿದ. ನೋಡುತ್ತಲೇ ನಿಧಿಯನ್ನು ಕಂಡವನಂತೆ ಆನಂದ ಹೊಂದಿ ಮತ್ತೆ ಮತ್ತೆ ನೋಡತೊಡಗಿದ. ಹೌದು, ಅದೇ ವದನ. ಕಾಮನಬಿಲ್ಲಿನಂತೆ ಬಾಗಿದಹುಬ್ಬು ಮಿನುಗುವ ಕಣ್ಣು. ಸಂಪಿಗೆಯಂತೆ ಮನೋಹರವಾದ ನಾಸಿಕ. ಅದೇ ತುಟಿ. ಎಲ್ಲವೂ ಅದೇ. ಸ್ವಲ್ಪವೂ ವ್ಯತ್ಯಾಸವಿಲ್ಲ. ಮನದಲ್ಲಿಯ ಅಸ್ಪಷ್ಟ ಕಲ್ಪನೆ, ಜೀವತಾಳಿ ಬಂದು ತನ್ನೆದುರು ನಡೆದು ಹೋಗುತ್ತಿರುವಂತೆ ಭಾಸವಾಯಿತು. ರೂಪದರ್ಶಿಗೆ ಇವಳೇ ಯೋಗ್ಯಳೆಂದು ನಿರ್ಣಯಿಸಿಕೊಂಡು ನಾಯಕರಲ್ಲಿಗೆ ಓಡಿದ.

"ಪ್ರಭೋ......"

ನಾಯಕರು ಭಾನುವನ್ನು ಸ್ವಾಗತಿಸಿ ಕೇಳಿದರು,

"ಏನು ಶಿಲ್ಪಾಚಾರ್ಯ ?

"ದೇವಸ್ಥಾನದ ಕಾರ್ಯಮುಂದುವರಿಯಬೇಕು ಅಲ್ಲವೇ ಪ್ರಭು ?"

"ಹೌದು ಆಚಾರ್ಯರೇ. ಇಂದಿಗೆ ದೇವಸ್ಥಾನ ಕಟ್ಟಿಸಿ ಹದಿನೇಳು ಸಂವತ್ಸರಗಳಾಯಿತು. ಆದರೂ ಭಗವಾನರ ಪ್ರತಿಷ್ಠಾಪನೆಯ ಯೋಗ ಬಂದಿಲ್ಲ. ನನ್ನ ಕಣ್ಣು ಮುಂದೆ ಇದು ಸಾಧ್ಯವೋ ಇಲ್ಲವೋ ಎಂದು ಚಿಂತಿಸುತ್ತಿದ್ದೇನೆ."

ನಾಯಕರ ಹೃದಯ ಭಾರವಾಗಿತ್ತು.

"ಹಾಗಾದರೆ ಒಂದು ಸಂಗತಿ ನಾಯಕರೇ. ನನ್ನ ಒಂದು ಕೋರಿಕೆ ಈಡೇರಿಸಿಕೊಟ್ಟರೆ ಈ ಪಕ್ಷ ಕಳೆಯುವುದರಲ್ಲಿ ದೇವಸ್ಥಾನದಲ್ಲಿನ ಕಾರ್ಯ ಮುಕ್ತಾಯಗೊಳ್ಳಬಹುದು."

"ಅಗತ್ಯವಾಗಿ ಆಗಲಿ. ಹೇಳಿ." ನಾಯಕರು ಆತುರದಿಂದ ಕೇಳಿದರು.

"ನೋಡಿ ನಾಯಕರೇ, ಮನದಲ್ಲಿ ಮೂಡಿಬಂದ ಕಲ್ಪನೆ ಕೈಯಲ್ಲಿ

ಸಾಗದಾಗಿದೆ. ರೂಪದರ್ಶಿಯಿಲ್ಲದೆ ಸಾಧ್ಯವೇ ಇಲ್ಲ ಎನ್ನುವ ತೀರ್ಮಾನಕ್ಕೆ ಬಂದಿದ್ದೇನೆ. ದೈವ ವಶಾತ್ ರೂಪದರ್ಶಿ ಒದಗಿಬಂದಿದೆ, ಅನುಗ್ರಹಿಸ ಬೇಕು."

"ರೂಪದರ್ಶಿ ? ಏನು ಬಿಡಿಸಿ ಹೇಳಿ ಆಚಾರ್ಯ"

ಅರಮನೆಯ ತೋಟದತ್ತ ಕೈಮಾಡಿ ತೋರಿಸಿದ ಭಾನು ಹೇಳಿದ,

"ಅಲ್ಲಿ ನೋಡಿ ನಾಯಕರೇ. ಅಲ್ಲಿ ನನ್ನ ತಂಗಿಯೊಬ್ಬಳು ಗಿಡದಿಂದ ಪುಷ್ಪ ಆರಿಸುತ್ತಿದ್ದಾಳೆ. ಅವಳು ರೂಪದರ್ಶಿಯಾದರೆ ನಿಮ್ಮ ಕಾರ್ಯ ನಿರ್ವಿಘ್ನವಾಗಿ ಸಾಗಬಲ್ಲದು."

ತೋಟದತ್ತ ನೋಡಿದ ನಾಯಕರು ಸ್ಥಬ್ಧರಾದರು. ಉಸಿರು ಹಿಡಿದು, ಹಿಡಿದು ಬಿಡತೊಡಗಿದರು.

ಸಾಧ್ಯವೇ ನಾಯಕರೇ ?" ನಾಯಕರ ಮೌನವನ್ನು ಕಂಡು ಭಾನುವೇ ಕೇಳಿದ.

"ಆಗದೆ ಉಂಟೆ ಆಚಾರ್ಯ ! ನಿಂತ ಭಗವಾನರ ಕಾರ್ಯ ಮುಂದು ವರಿಯಬೇಕು, ಅಷ್ಟೆ. ಈ ಪಕ್ಷದಲ್ಲಿ ಆದೀತೆ ?"

"ಆದೀತು. ಅಪೂರ್ವ ಕಲಾಕೃತಿ ಚಿಮ್ಮಿಸಿ ಜೀವಂತವಾಗಿಸುತ್ತೇನೆ. ಆದರ ಮುಂದೆ ಮತ್ತೊಂದು ಸಾಟಿಯಾಗದಂತಹುದನ್ನು ಕಡೆಯುತ್ತೇನೆ. ಇತಿಹಾಸಧಲ್ಲಿ ಬಹುಕಾಲ ನಿಲ್ಲುವಂತಹ ಚಿತ್ರ ನಿರ್ಮಿಸುತ್ತೇನೆ" ಎಂದು ನುಡಿದ ಭಾನು ಹೊರಟ.

ಅವಿರತವಾಗಿ ಸಾಗಿದೆ ಭಾನುವಿನ ಶಿಲ್ಪಕಾರ್ಯ, ನಾಯಕರ ಕುವರಿ ಉದಯ, ಭಾನುವಿನ ಕಾರ್ಯಕ್ಕೆ ರೂಪದರ್ಶಿಯಾಗಿ ನಿಂತಿದ್ದಾಳೆ. ಅಪೂರ್ಣವಾಗಿ ನಿಂತಿದ್ದ ಶಿಲ್ಪಾಚಾರ್ಯರ ಕಾರ್ಯ ಮುಂದುವರಿದಿದೆ. ಪಕ್ಷ ಕಳೆಯಲು ಮತ್ತೊಂದು ರಾತ್ರಿ ಬೇಕು. ಭಾನು, ಉದಯರ ಮೈಯಲ್ಲಿ ಅವ್ಯಕ್ತ ಶಕ್ತಿ ಸ್ಫುರಿಸಿದಂತಿದೆ. ಇಬ್ಬರೂ ತಲ್ಲೀನರಾಗಿದ್ದಾರೆ. ಭಾನುವಿನ ಕರ ಸಾಗುತ್ತಲೇ ಇದೆ. ಭಾವಭಂಗಿಯಲ್ಲಿ ನಿಂತಿದ್ದಾಳೆ ಉದಯ. ಅಮರ ಸೃಷ್ಟಿಯಲ್ಲಿ ಕ್ಷಣಿಕ ಜೀವದ ಲಕ್ಷವೇ ಇಲ್ಲ.

ಸಂಧ್ಯೆ ನಿಶೆಯಲ್ಲಿ ಐಕ್ಯವಾಗತೊಡಗಿದ್ದಾಳೆ. ದೇವಾಲಯದಲ್ಲಿ ಹಣತೆಯೊಂದು ಉರಿಯುತ್ತಿದೆ. ವೇಳೆಯ ಪರಿಯೇ ಇಲ್ಲ. ಎರಡು ಜೀವ

ಗಳು. ಅಲೌಕಿಕ ಸೃಷ್ಟಿಯಲ್ಲಿ ಸಾಗಿವೆ. ಭಾನುವಿನ ಶಿಲ್ಪಾಕಾರ್ಯ ಮುಗಿದಂತೆ ಕಾಣುತ್ತದೆ. ಶಿಲಾಬಾಲಿಕೆಯ ಕಿರುಬೆರಳಿನ ರೂಪುತಿದ್ದಿದರೆ ತೀರಿತು. ಭಾನು ಧನ್ಯನಾದಂತೆ. ಉದಯಳ ಬೆರಳು ನೋಡುತ್ತಿದ್ದಾನೆ. ಕೈಯಲ್ಲಿ ಉಳಿ ಆಡುತ್ತಿದೆ.

"ಅಯ್ಯೋ....ಆಚಾರ್ಯ...."

ಆಯತಪ್ಪಿ ಉಳಿಯಪೆಟ್ಟು ಭಾನುವಿನ ಎಡದ ಹಸ್ತದ ಹೆಬ್ಬೆರಳನ್ನು ತುಂಡರಿಸಿಬಿಟ್ಟಿದೆ. ರಕ್ತ ಚಿಲ್ ಎಂದು ಹರಿಯತೊಡಗಿದೆ. ಹಾಗಾದರೂ ಭಾನು ಉದಯಳತ್ತ ನೋಡಿದ.

ಉದಯ ಶಿಲಾ ಬಾಲಿಕೆಯನ್ನು ಆತು ಹಾಗೆಯೇ ಒರಗಿದ್ದಾಳೆ. ಶಿಲಾಬಾಲಿಕೆ ಜೀವಂತವಾಗಿದೆ. ಲೌಕಿಕ ಜೀವ ಅಲೌಕಿಕದಲ್ಲಿ ಆವಿರ್ಭೂತ ವಾಗಿ ಹೋಗಿದೆ.

"ಅಮ್ಮಾ....ತಾಯೇ......ಪ್ರಸನ್ನವಾದೆಯಾ" ಭಾನು ಉದಯಳ ಪಾದದ ಮೇಲೆ ಉರುಳುತ್ತಾನೆ.

ತೋಟದಲ್ಲಿ ಅರಳಿದ್ದ ಪುಷ್ಪದ ಕಂಪು ಗಾಳಿಯಲ್ಲಿ ತೀಡಿ ತೀಡಿ ಬರುತ್ತಿದೆ. ಗಾಳಿಯ ರಭಸಕ್ಕೆ ದೇವಾಲಯದ ಘಂಟೆಗಳು ಹೊಡೆದುಕೊಳ್ಳುತ್ತಿವೆ. ಕತ್ತಲುಕಳೆದು ಸುಪ್ರಭಾತವಾಗತೊಡಗಿದೆ. ಪಕ್ಷಿಗಳು ಪರಾಖ್ ಹೇಳ ತೊಡಗಿವೆ.

ಒಮ್ಮೆಯೇ ಬೋರೆಯಲ್ಲಿ ಕುಳಿತಿದ್ದ .ಶಿಲ್ಪಾಚಾರ್ಯರು ಎದ್ದುನಿಂತು ಕೈಮುಗಿದು ಕಣ್ಣು ಒರೆಸಿಕೊಳ್ಳುತ್ತಾರೆ.

# ವಿಮೋಚನೆ

"ಇದು ಯಾವ ರೀತಿಯ ಬಂಧನ ಎಂದು ನನಗೆ ಅರ್ಥವಾಗುವುದಿಲ್ಲ. ಪ್ರಕೃತಿಯನಿಗೂಢ ಮಮತೆ ಯಾವ ಒಂದು ಅಂಶದಲ್ಲಿ ಎದ್ದು ಕಾಣುತ್ತದೆ ಎಂದು ಬಲ್ಲವರಾರು? ಬದುಕಲೇ ಬಾರದು ಎನ್ನುವವರಿಗೆ ಯಾವುದೋ ಒಂದು ಪ್ರಬಲ ಅಂಕುಶ ನೇತು ಬೀಳುತ್ತದ್ದಲ್ಲ ಎಂದು ಅಚ್ಚರಿಪಡುತ್ತೇನೆ. ಆದರೆ ಜನ್ಮಾಂತರದ ಋಣಾನುಬಂಧನದ ಬೀಳುಗಳು ಎಲ್ಲಿ ಜೀಳುತ್ತದೋ ಎಂದು ಬಲ್ಲವರಾರು.......?"

೭

ಇಂದು ಪೋರ್ಣಮಿ ಯಾಗಿರಬೇಕು. ಚಂದಿರ ಮೈತುಂಬಿ ನಿಂತಿದ್ದಾನೆ. ಹಿಂದಲ ಅನಂತ ಕ್ಲೇಶಗಳನ್ನೆಲ್ಲಾ ಕಳೆದು ಸ್ವಚ್ಛವಾಗಿ ಕಿಲಕಿಲ ನಗುತ್ತಿದ್ದಾನೆ. ನೀಲ ನಿಶಾನೆಯಲ್ಲಿ ಮಲಗಿದ ಅವನ ಮೂರ್ತಿ ಮನದಲ್ಲಿ ತುಂಬಿ ನಿಲ್ಲುತ್ತದೆ. ಎದುರಿಗೆ ಕಡಲಿದೆ. ಬೃಹದಾಕಾರವಾದ ಅಲೆಗಳೆದ್ದು ತೂಯ್ಯುತ್ತಾ ದಡದೆಡೆಗೆ ಬಂದು ಬಡಿಯುತ್ತವೆ. ದಡದಿಂದ ಮತ್ತೆ ಕಡಲ ಕಡೆಗೆ ನೀರು ರಭಸದಿಂದ ನುಗ್ಗತೊಡಗುತ್ತದೆ. ಚಂದಿರನ ಚುಂಬನಕ್ಕೆ ಕಡಲು ಸಂಪೂರ್ಣ ಒಳಗಾಗಿ ಒಂದು ರೀತಿಯ ಕಾಂತಿ ಪಡೆದಿದೆ.

ಕಡಲ ದಂಡೆಯ ಮರಳ ಮೇಲೆ ಕುಳಿತ್ತಿದ್ದೇನೆ. ಚಂದಿರನ ನೀಲ ಜಲರಾಶಿಯ ಆಟವನ್ನು ಗಮನಿಸುವುದರಲ್ಲಿ ತಲ್ಲಿನನಾಗಿರುವಾಗ ತಟಕ್ಕನೆ ಎಚ್ಚರವಾಗಿ ಬಿಡುತ್ತದೆ. ಹೃದಯದಲ್ಲಿ ಎಣೆಕಾಣದ ತುಮುಲ ಪ್ರಾರಂಭ ವಾಗುತ್ತದೆ. ಬಿರುಗಾಳಿ ಎದ್ದಂತೆ, ಒಮ್ಮೆ ನನ್ನ ಹೃದಯದಲ್ಲಿ ತುಮುಲವೆದ್ದ ರಾಯಿತು ಅದಕ್ಕೆ ಎಣೆಯೇ ಇಲ್ಲ. ಆದರಿಂದ ಜರ್ಝರಿತನಾಗಿ ಬಿಡುತ್ತೇನೆ ಚೇತನಗೊಳ್ಳುತ್ತಿದ್ದ ಮನ ಮತ್ತೆ ಬಾಡಿ ಬರಿದಾಗಿ ಶೂನ್ಯ ಆವರಿಸಿ ಬಿಡು ತ್ತದೆ.

ಕೈಯಲ್ಲಿ ಸಾಧ್ಯವಾಗುವ ಮಟ್ಟಿಗೂ ಮರಳಿನಲ್ಲಿ ಗುಳಿ ತೋಡುವುದು. ತೋಡಿದಹಳ್ಳವನೊಮ್ಮೆ ತೀಕ್ಷ್ಣವಾಗಿ ನೋಡಿ ಲಗುಬಗೆಯಿಂದ ಮತ್ತೆ ಮುಚ್ಚಿಬಿಡುವುದು. ಆಸೆ ಅಮಿಷಗಳನ್ನು, ಮಮಕಾರ ದ್ವೇಶಗಳನ್ನೆಲ್ಲಾ ಒಟ್ಟುಮಾಡಿ ಆ ಹಳ್ಳದಲ್ಲಿ ದೂಡಿ ಮುಚ್ಚಲು ಸಾಧ್ಯವಾದರೆ ?

"ಮಾಮ........

ಸುಡು ಬೇಸಿಗೆಯಲ್ಲಿ ಮಂದ ಮಾರುತ ಬೀಸಿದಂತೆ ಅಮೃತ ಸಿಂಚನೆ

ಯಾದಂತೆ ಆಗುತ್ತದೆ. ಉದ್ವಿಗ್ನಗೊಂಡು ಮನಸ್ಸು ಮತ್ತೆ ಸ್ಥಿಮಿತಕ್ಕೆ ಬರ ತೊಡಗುತ್ತದೆ.

"ಝಲ್....ಕಣ್....ಝಲ್....

"ಮಾಮ........

ತಪ್ಪು ಹೆಜ್ಜೆಗಳನ್ನಿಡುತ್ತಾ ಬೇಬಿ ಬರುತ್ತಿರಬೇಕು. ಈಗ ಬಂದು ಕತ್ತಿನ ಸುತ್ತ ತನ್ನ ಪುಟ್ಟ ಕೈಯನ್ನು ಸುತ್ತಿ ಜೊಲ್ಲು ಸೂಸುತ್ತ ಬೆನ್ನಿಗೆ ಗಡ್ಡಿಯಾಗಿ ಆತುಕೊಳ್ಳುತ್ತಾ ಹೇಳುತ್ತಾಳೆ. ಕೂಸು....ಮಲಿ....ಬೇ.... ತಾ....ಕೂ....ತು........

ಮರುಭೂಮಿಯ ಮೇಲೆ ಝಡಿ ಮಳೆಯಾದಂತೆ ಮೈಯಲ್ಲಿ ಒಮ್ಮೆ ಮಧುರ ಕಂಪನವಾಗುತ್ತದೆ. ಆ ಅಪ್ಪುಗೆಯಲ್ಲಿ ಅನಂತ ಚಿಂತೆ ಬೇಸರಗಳು ಕರಗಿಕರಗಿ ನೀರಾಗಿ ಹರಿದು ಹೋಗುತ್ತವೆ.

"ಮಾಮ........

ಸರಿಯಾಗಿ ನಡೆಯಲು ಬಾರದ ಬೇಬಿ ತುಪು ತುಪು ಬೀಳುತ್ತಾಳೆ. ಬಿದ್ದ ಗಳಿಗೆಯಲ್ಲಿಯೇ ಎದ್ದು ಮತ್ತೆ ನಡೆಯಲು ಪ್ರಯತ್ನಿಸುತ್ತಾಳೆ. ಕಾಲಿನ ಗೆಜ್ಜೆಯ ಝಲ್ ಝಲ್ ನಾದ ಕಿವಿಯ ತುಂಬಾ ಬಂದು ತುಂಬಿಕೊಳ್ಳುತ್ತದೆ.

"ಮಾಮ........

ರೂಮಿನ ಕೀಲಿಯ ಶಬ್ದ ವಾದೊಡನೆಯೇ ತಾಯಿಯ ಮಡಿಲಿನಿಂದ ಜಾರಿಕೊಂಡು ಬರುತ್ತಾಳೆ. ಚಾಕಲೇಟನ್ನು ಬಾಯಿಗಿಟ್ಟು ಲೊಚ ಲೊಚ ಎಂದು ಹತ್ತಾರು ಬಾರಿ ಮುತ್ತಿಟ್ಟ ಮೇಲೆಯೇ ಸಮಾಧಾನವಾಗುವುದು.

"ಮಾಮ... ....

ಬೇಬಿಗೆ ಜೊಲ್ಲು ಜಾಸ್ತಿ. ಅವಳ ಗುಂಗುರು ಕೂದಲೆಲ್ಲ ಜೊಲ್ಲಿನಿಂದಾಗಿ ಕೆನ್ನೆಗೆ ಅಂಟಿ ಬಿಟ್ಟಿರುತ್ತದೆ ಜೇಬಿನಿಂದ ಕರ್ಚೀಫು ತೆಗೆದು ಒರಸಿ ಹಣೆಯ ಮೇಲೆ ಮುಂದಾದ ಕೂದಲನ್ನೆಲ್ಲಾ ಮೇಲಕ್ಕೆ ಎತ್ತಿ ಹಣೆಯ ಮೇಲೆ ಮತ್ತೊಂದು ಸಾರಿ ಮುತ್ತಿಟ್ಟರೆ.......

ಸೃಷ್ಟಿಕರ್ತ ಆ ಪರಮಾತ್ಮನ ಅಪರಿಮಿತ ಕಲಾ ಕೌಶಲ್ಯವನ್ನೊಮ್ಮೆ ನೆನೆದು ತಲೆದೂಗುವಂತಾಗುತ್ತದೆ. ಬೇಬಿಯ ಕಣ್ಣು ನೋಡಬೇಕು. ಪಟ್

ಹಟ್ ಎಂದು ಬಡಿದು ಬೇಬಿ ನಕ್ಕರೆ ಸಾಕು, ಜೇನು ಸುರಿದ ಹಾಗೆ ಆಗುತ್ತದೆ. ಬೆಂದ ಜೀವ ಹಾಯ್ ಎನಿಸುತ್ತದೆ.

"ಮಾಮ.........

ಅಳುವ ಸದ್ದು ಬೇಬಿ ಅಳುತ್ತಿರಬೇಕು. ರೂಮಿನ ಬೀಗ ತೆಗೆಯಲು ಹೊರಟವನು ಹಾಗೆಯೇ ಹಿಂದಕ್ಕೆ ತಿರುಗಿ ಮನೆಯೊಳಗೆ ನಡೆದು ಹಾಲಿನಲ್ಲಿ ನಿಂತು ನೋಡುವುದು, ಎಲ್ಲಿದ್ದಾಳೆಂದು. ಹಾಲಿನಲ್ಲಿ ಕಟ್ಟಿದ್ದ ತೊಟ್ಟಿಲು ಸಣ್ಣಗೆ ಆಡುತ್ತಿದೆ. ಬಗ್ಗಿ ನೋಡಿದರೆ ಕಿರುನಗೆ ಸೂಸುತ್ತಾ ಬೇಬಿ ಮೈ ಚಾಚಿ ಮಲಗಿದೆ. .ಯಾವ ಅರಿವು ಇಲ್ಲದೆ ನಿರಾತಂಕವಾಗಿ ಮಲಗಿದೆ. ಎಲ್ಲಾ ಭ್ರಮೆ, ಭ್ರಮೆಗೆ ನಗು ಬರುತ್ತದೆ!

"ಅದೇಕೆ ಒಬ್ಬರೆ ನಗುತ್ತಿರಲ್ಲಾ ?"

ಬೆಚ್ಚಿಬಿದ್ದೆ. ಸುಷುಪ್ತಾವಸ್ಥೆ ಹರಿಯಿತು. ನಡೆದದ್ದನ್ನು ನೆನಸಿಕೊಂಡು ಮತ್ತೊಮ್ಮೆ ನಕ್ಕೆ.

"ಏನು ಸಂಗತಿ ? ನಗುತ್ತಿರಲ್ಲಾ."

ಹೆಗಲ ಮೇಲಿದ್ದ ಟವಲಿನಿಂದ ಕೈ ಒರಸಿಕೊಳ್ಳುತ್ತಾ ಕೇಳಿದರು ಒಳಗಿನಿಂದ ಬಂದ ಶಾಂತಿ.

ಶಾಂತಿಯು ಹಾಗೆಯೇ. ಆಕೆಯ ಗುಂಗುರೆಲ್ಲಾ ಬೇಬಿಗೆ ಬಂದಂತಿದೆ. ತಾಯಿಯಂತೆ ಚಂಚಲವಾದ ಕಣ್ಣು, ಯಾವುದನ್ನು ಬೇಕಾದರೂ ಸೆರೆ ಹಿಡಿದು ನಿಲ್ಲಿಸಬಹುದಾದ ಅವ್ಯಕ್ತ ಶಕ್ತಿ.

"ಬೇಬಿ ಅತ್ತ ಹಾಗೆ ಆಯಿತು. ನೋಡಲು ಬಂದೆ ತೊಟ್ಟಿಲಲ್ಲಿ ಆರಾಮವಾಗಿ ಮಲಗಿದ್ದಾಳೆ. ನನ್ನ ಭ್ರಮೆಗೆ ನಗು ಬಂದಿತು, ಅಷ್ಟೆ."

"ಊಟವಾಯಿತೆ ?"

"ಇಲ್ಲ. ಮುಖ ತೊಳೆದುಕೊಂಡು ಹೋಗುತ್ತೇನೆ."

"ಈಗಲೇ ವೇಳೆಯಾಗಿದೆ. ಹೋಟಲಿನಲ್ಲಿ ಊಟ ಸಿಗುವುದೋ ಇಲ್ಲವೋ, ಇಲ್ಲೆ ಊಟ ಮಾಡಿ."

"ಸಿಗದೇ ಏನು ? ಈಗಲೇ ಹೋಗುತ್ತೇನೆ."

"ತಣಿದು ಹೋದ ಊಟ ಏಕೆ ಮಾಡಬೇಕು.? ಮುಖ ತೊಳೆದು ಬನ್ನಿ."

ಮಾತು ಮುಂದುವರಿಸದೆ ಶಾಂತಿ ಒಳ ಹೋಗಿ ತಟ್ಟೆ ಇಡತೊಡಗಿದರು.

ನನಗೆ ಹೆಂಗಸರ ಬಳಿ ಮಾತನಾಡಬೇಕು ಎಂದರೆ ಗಂಟಲಿನಿಂದ ಧ್ವನಿಯೇ ಹೊರಡುವುದಿಲ್ಲ. ಬೇಬಿಯ ತಾಯಿ ಎಂಬ ಧೈರ್ಯದಿಂದ ಶಾಂತ ಅವರ ಹತ್ತಿರ ಮಾತನಾಡುವ ಸಾಹಸ ಮಾಡಿದ್ದೇನೆ. ನನ್ನ ಮಾತು ಮುಂದುವರೆಯ ಗೊಡದೆ ಅನೇಕ ಬಾರಿ ಈ ರೀತಿಯ ಇರುಕಿಗೆ ಸಿಕ್ಕಿಸಿ ಬಿಟ್ಟಿದ್ದಾರೆ. ಯತ್ನವಿಲ್ಲ. ಮಾಡಿಯೇ ತೀರಬೇಕು.

ತಾಟಿನ ಮುಂದೆ ಊಟಕ್ಕೆ ಕುಳಿತಾಗ ಮಾತಿಗೆ ಪ್ರಾರಂಭ.

"ಸರಿಯಾದ ಊಟ ಇಲ್ಲದೆ ಹೋದರೆ ಆರೋಗ್ಯ ಕೆಡುತ್ತದೆ."

"ಹೌದು."

"ಹೋಟೆಲಿನ ಊಟ........

ಮಾತು ಎಲ್ಲಿಗೆ ಬಂದು ನಿಲ್ಲುತ್ತದೆ ಎಂದು ನಾನು ಬಲ್ಲೆ.

ಬೆಳೆಯಗೊಡಬಾರದು. ತಟಕ್ಕನೆ ಹೇಳಿದೆ.

"ನಾನು ಊಟಮಾಡುವ ಹೋಟೆಲಿನಲ್ಲಿ ಪರವಾಗಿಲ್ಲ."

"ಸುಳ್ಳು ಹೇಳುತ್ತೀರಿ. ಇತ್ತೀಚೆಗಂತೂ ಬಹಳ ಸೊರಗಿ ಹೋಗಿದ್ದೀರಿ.

ಇದಕ್ಕೇನು ಹೇಳುವುದು ? ಹೆಚ್ಚಾದರೂ ಮೌನವಾಗಿ ಊಟಮಾಡಿ ಏಳುವುದು. ಹೋಟೆಲಿನಲ್ಲಿ ಎಂದೂ ಇಷ್ಟು ಊಟ ಮಾಡುವಂತಿಲ್ಲ. ಬೇಬಿಯ ಮನೆಯಲ್ಲಿ ಆದರೆ ಮಾತ್ರ ಇಷ್ಟು.

ನಿದ್ರೆಯಿಂದ ಎಚ್ಚತ್ತ ಬೇಬಿ ಮುಖದ ಮೇಲೆ ಕೂರಲು ಪ್ರಯತ್ನಿಸುತಿದ್ದ ನೊಣ ಹಿಡಿಯಲು ಕೈ ಚಾಚುತ್ತಿದ್ದಾಳೆ. ಅವಳ ಆಟ ಗಮನಿಸಲು ಮರೆಯಾಗಿ ನಿಲ್ಲಬೇಕು ಎನ್ನುವಷ್ಟರಲ್ಲಿ

ಮಾಮ........

ಬಹು ಸೂಕ್ಷ್ಮ ಈ ಬೇಬಿಗೆ. ಎತ್ತಿಕೊಂಡು ರೂಮಿಗೆ ನಡೆಯುವುದು. ವೇಳೆಯ ಪರಿವೆಯೇ ಇಲ್ಲ. ಬೇಬಿಯೊಂದಿಗೆ ಆಡುವುದು. ಬೇಬಿಯೊಂದಿಗೆ ನಾನೂ ಬೇಬಿ ಪ್ರಪಂಚದ ಯಾವ ರಗಳೆಯೂ ಇಲ್ಲ. ಸ್ವೇಚ್ಛೆಯಾಗಿಆಡುತಲೇ ಇರುವುದು.

"ಐದು ಗಂಟೆ. ಬೇಬಿಗೆ ಹಾಲು ಹಾಕಬೇಕು ಕೊಡಿ." ಶಾಂತ ಬಾಗಿಲಿನಲ್ಲಿ ನಿಂತಾಗಲೇ ಮತ್ತೆ ಎಚ್ಚರ.

ಬೇಬಿ ಅತ್ತ ಹೋದ ಒಡನೆಯೇ ಕೋಣೆಯಲ್ಲಿ ಮತೆ ಬಿಕೋ ಆವರಿಸುತ್ತದೆ ಅಸಾಧ್ಯವಾದ ಧಗೆ ಸುಡತೊಡಗುತ್ತದೆ. ಮನದಲ್ಲಿ ಎಣೆ ಇಲ್ಲದ ಯೋಚನೆ ಎದ್ದು ಕಾಡುತ್ತದೆ.

ಹಾಸಿಗೆಯ ದಿಂಬಿಗೆ ಮುಖ ಒತ್ತುವುದು, ಪ್ರಯೋಜನವಿಲ್ಲ. ಒಮ್ಮೆ ನೆನಪಿನ ಸುರಳಿ ಬಿಚ್ಚಿಕೊಳ್ಳತೊಡಗಿದರೆ........

"ಮುಂಬಾಯಿ ಸೇರಿದ ಕೂಡಲೇ ಕಾಗದ ಬರಿಯಪ್ಪ."

"ಆಯಿತು."

"ಹಪ್ಪಳ, ಚಟ್ನಿಪುಡಿ, ಅವಲಕ್ಕಿ ಇಟ್ಟುಕೊಂಡೆಯಾ ರಾಮಣ್ಣ ?"

"ಹೂ ಕಣಮ್ಮ ...?"

ನಮಸ್ಕರಿಸಿ ಮೇಲೆದ್ದಾಗ ಹೆತ್ತ ಆ ಎರಡು ಜೀವಗಳ ಕಣ್ಣುಗಳು ಕೊಳಗಳಾಗಿದ್ದವು.

ಹೊಟ್ಟೆ ತುಂಬಿಸಿಕೊಳ್ಳಲು ಕಾರ್ಕಳ ಸಾಲದೆ ಮುಂಬಾಯಿ ಗೂಂಟಾ ಹೊರಟಾಗಿತ್ತು. ಏನೋ ಆಸೆ, ಅಲ್ಲಿ ನೌಕರಿ ಬಹು ಬೇಗ ಸಿಗುತ್ತದೆ ಎಂದು ಹೆಗ್ಗಡೆ ಬಂದಾಗ ಹೇಳಿದ್ದ. ಆ ಒಂದು ಆಶ್ವಾಸನೆ ಮುಂಬಾಯಿಯ ಕಡೆಗೆ ಎಳೆದಿದ್ದವು. ಹೆಗ್ಗಡೆಯ ವಿಳಾಸಕ್ಕೆ ಆಗಲೇ ಕಾಗದ ಬರೆದು ಹಾಕಿಯಾಗಿತ್ತು.

ತಂಗಿ ಲಕ್ಷ್ಮೀ ಅಳುತ್ತಾ ನಿಂತಿದ್ದಾಳೆ.

"ಅಳಬೇಡ ಲಕ್ಷ್ಮೀ . ಅಮ್ಮ ಅಪ್ಪಯ್ಯ ಹೇಳಿದ ಹಾಗೆ ಕೇಳು. ಮುಂಬಾಯಿಗೆ ಹೋಗಿ ನೌಕರಿಗೆ ಸೇರಿದ ಕೂಡಲೇ ಜರಿ ಲಂಗ ಹೊಲೆಸುತ್ತೇನೆ.

ಹುಟ್ಟಿ ಬೆಳೆದ ಊರನ್ನು ಬಿಟ್ಟಾಗಿತ್ತು. ಮನದಲ್ಲಿ ನೂರಾರು ಆಕಾಂಕ್ಷೆಗಳು ಪುಡಿದೇಳುತ್ತಿವೆ. ವಿಶ್ವವಿದ್ಯಾನಿಲಯದ ಡಿಗ್ರಿಯಿದೆ. ಸ್ವಲ್ಪ ಕಷ್ಟ ಬಿದ್ದರೆ ಒಳ್ಳೆಯ ನೌಕರಿ ದೊರಕಬಹುದು. ಅಪ್ಪಯ್ಯನ ಹೆಸರಿಗೆ ಮಣಿಯಾರ್ಡರು ಮಾಡಬೇಕು. ತಂಗಿ ಲಕ್ಷ್ಮೀಗೆ ಒಂದು ಜರಿಯ ಲಂಗದ

ಬಟ್ಟೆ, ಅಮ್ಮನಿಗೆ ಸೀರೆ ತೆಗೆದು ಪಾರ್ಸಲ್ ಮಾಡಿ ಕಳುಹಿಸಬೇಕು.

ಮುಂದಾದರೂ ಅಪ್ಪ ಅಮ್ಮನನ್ನು ಸುಖವಾಗಿರಿಸಲು ಪ್ರಯತ್ನಿಸಬೇಕು. ಮನೆಯವರನ್ನು ಎಣಿಕಾಣದ ಬಡತನದ ಬೇಗೆಯಿಂದ ವಿಮೋಚನೆಗೊಳಿಸಬೇಕು.

ಊರಿನಲ್ಲಿ ತೋರಿದ ಆದರ ವಿಶ್ವಾಸ ಮುಂಬಾಯಿಯಲ್ಲಿ ಹೆಗ್ಗಡೆ ತೋರಿಸುತ್ತಿಲ್ಲವೇಕೆ ಎಂಬುದು ಎರಡು ದಿನದಲ್ಲಿಯೇ ಅರ್ಥವಾಯಿತು ಪುಣ್ಯಾತ್ಮ ಸರಿಯಾಗಿ ಮುಖ ಕೊಟ್ಟು ಮಾತನಾಡುವುದೇ ಇಲ್ಲ. ಕಾಲದ ದುರ್ಭರ ಪರಿಸ್ಥಿತಿ; ಅವನು ತಾನೆ ಏನು ಮಾಡುತ್ತಾನೆ. ಒಮ್ಮೆ ತಡೆಯದೆ ಕೇಳಿದೆ.

ನನ್ನ ಆಗಮನದಿಂದ ನಿನಗೆ ತೊಂದರೆ ಆಗಿದ್ದರೆ ಹೇಳಿ ಬಿಡು ಹೆಗ್ಗಡೆ."

"ಹಾಗೇನಿಲ್ಲ." ಹಾರಿಕೆಯ ಉತ್ತರ ಕೊಟ್ಟಿದ.

ನನಗೊಂದು ಕೋಣೆ ದೊರಕಿಸಿ ಕೊಟ್ಟುಬಿಡು ಹೆಗ್ಗಡೆ. ಬಹಳ ಉಪಕಾರವಾಗುತ್ತದೆ."

"ಮುಂಬಾಯಿಯಲ್ಲಿ ಅಷ್ಟು ಸುಲಭವಾಗಿ ಕೋಣೆಗಳು ದೊರೆಯುತ್ತವೆಯೇನು ? ಪ್ರಯತ್ನಿಸೋಣ."

ಹಾಗೇ ಹೇಳಿದ ಒಂದು ವಾರದಲ್ಲಿಯೇ ಮಾತುಂಗದಲ್ಲಿಯ ಒಂದು ಸೌಧದ ಮೂರನೆಯ ಫ್ಲಾಟಿನಲ್ಲಿ ಕೋಣೆ ದೊರಕಿಸಿದನೆಂದು ಹೇಳಿದ. ಅರವತ್ತು ರೂಪಾಯಿ.

ಬಹಳ ದುಬಾರಿಯಾಗಲಿಲ್ಲವೆ ಹೆಗ್ಗಡೆ ?

"ಅದಕ್ಕಿಂತ ಕಮ್ಮಿಗೆ ದೊರಕಿಸಿಕೊಂಡು ಬಾ ಕೇಳಿದ್ದು ಕೊಡುತ್ತೇನೆ.

ಪ್ರಾಯಶಃ ನನ್ನ ಆಗಮನ ಅವನಿಗೆ ಸಹ್ಯವಾಗದೆ ಇರಬಹುದು. ವೃಥ ಏಕೆ ಅವನಿಗೆ ಬೇಸರ ? ಅರವತ್ತು ರೂಪಾಯಿ ತೆಗೆದುಕೊಟ್ಟಾಗ ಹದಿನಾಲ್ಕು ರೂಪಾಯಿ ಮಾತ್ರ ಮಿಕ್ಕಿದ್ದವು.

ಹೆಗ್ಗಡೆಯ ಹಂಗಿಲ್ಲ. ರೂಮಿನಲ್ಲಿ ಕದ ಹಾಕಿಕೊಂಡು ಆರಾಮವಾಗಿ ಒಬ್ಬನೆ ಇರಬಹುದು. ಬದುಕಿದ್ದಾನೋ, ಸತ್ತಿದ್ದಾನೋ ಎಂದು

ಯಾರು ವಿಚಾರಿಸುವುದಿಲ್ಲ. ಈಗ ಜೀವನದ ನಿಷ್ಠುರ ಸತ್ಯದ ಎದುರು ಹೋಗುತ್ತಿದ್ದೇನೆ. ಎಲ್ಲವೂ ಹೊಸ ಅನುಭವವೇ ಆಗುತ್ತದೆ.

ಅರ್ಜಿಗಳನ್ನು ಬರೆದು ಕೊಂಡು ಕಂಪೆನಿ, ಕಾರ್ಖಾನೆಗಳ ಬಾಗಿಲು ಕಾದು ಒಳ ತೂರುವುದು, ನಿರಾಶೆಯಿಂದ ಹೊರಬರುವುದು, ದಿನವೆಲ್ಲಾ ಸತ್ತು ಸುಣ್ಣವಾಗಿ ಕೋಣೆಗೆ ಹಿಂತಿರುಗಿ ಹೊಟ್ಟೆಯ ತುಂಬಾ ನೀರು ಕುಡಿದು ಬರುವುದು, ಕದ ಹಾಕಿಕೊಂಡು ಮಲಗಿ ಬಿಡುವುದು.

ಬೆಳಗಾದರೆ ಅದೇ ಪುನರಾವರ್ತನೆ. ಸುತ್ತುವುದು. ಎಣೆ ಕಾಣದ ಸುತ್ತಾಟ. ದಿನಗಳು ತಿಂಗಳಾಗಿ ಉರುಳಿದ್ದವು. ಕೋಣೆಯ ಬಾಡಿಗೆ ತುಂಬಲು ಕೈ ಗಡಿಯಾರ ಮಾರಿಯಾಗಿತ್ತು. ಹೊಟ್ಟೆಗೆ ಎಷ್ಟು ಕಮ್ಮಿ ಮಾಡಿದರೂ, ಜೀವನ ದುರ್ಭರವಾಗತೊಡಗಿದೆ.

ಊರಿಗೆ ಪುನಃ ಹಿಂತಿರುಗುವುದೇ ? ಮನೆಯ ವಾತವರಣ ಮತ್ತೆ ಕಣ್ಣು ಮುಂದೆ ಹಾದು ಹೋಗುತ್ತದೆ. ಅದೇ ಬಡತನ ಅಪ್ಪನಿಗೆ ಹಾಕಲು ಅಂಗಿಯೇ ಇಲ್ಲ. ಎಲ್ಲಾದರೂ ಹೋಗುವುದಿದ್ದರೆ ವಸ್ತ್ರ ಹೊದ್ದೇ ಹೋಗು ತ್ತಾರೆ. ಇರುವ ಲಂಗವೂ ಹರಿದಿದೆ ; ಲಕ್ಷ್ಮಿಗೆ. ಅಮ್ಮ ಯಾವ ಆಸೆ ಆಕಾಂಕ್ಷೆಗಳನ್ನು ಇಟ್ಟು ಕೊಂಡತೆಯೇ ಕಾಣುವುದಿಲ್ಲ.

ಏನಾದರೂ ನಿರ್ವಿಕಾರವಾಗಿ ನಕ್ಕು ಬಿಡುತ್ತಾಳೆ. ಅವಳ ನಗು ಎದೆ ಯನ್ನು ಜಲ್ ಎನ್ನಿಸಿ ಬಿಡುತ್ತದೆ. ಹೇಗಾದರೂ ಮಾಡಿ ಅವರನ್ನೆಲ್ಲಾ ಕಾರಾಳ ಬಡತನದಿಂದ ವಿಮೋಚನೆಗೊಳಿಸಬೇಕು.

ವಿಮೋಚನೆಯ ನೆನಪಾದೊಡನೆ ಪ್ರಯತ್ನ ಮತ್ತೆ ಸಾಗುತ್ತದೆ. ತಿಂಗಳ ಅಂತ್ಯದಲ್ಲಿ ಊರಿಗೊಂದು ಕಾಗದ ಹಾಕುವುದು. ಇನ್ನೇನು ನೌಕರಿ ಸಿಗುವುದಿದೆ, ಸಿಕ್ಕ ಕೂಡಲೇ ಬರೆಯುತ್ತೇನೆ.

ಇಂತಹ ಪ್ರಯತ್ನಗಳು ಹಲವಾರು ಆಗಿಹೋಗಿದೆ. ಅಸ್ಸಾಹಯಕತೆಯ ಬೇಗೆಯಿಂದ ಜೀವತಪ್ತವಾಗಿ ಬಿಡುತ್ತದೆ ಮನಸ್ಸಿಗೆ ವಿರುದ್ಧವಾಗಿ ಹೆಗ್ಗಡೆ ಯೊಂದಿಗೆ ಸುಮಾರು ಸಾಲ ಮಾಡಿಯಾಗಿದೆ.

ಬದುಕಲು ಬೇಕಾದ ಆಸೆ ಆಕಾಂಕ್ಷೆಗಳೇ ಒಂದೊಂದಾಗಿ ಮಾಯವಾಗ ತೊಡಗಿವೆ.

"ನಾವು........

ತಿರುಗಿ ನೋಡಿದಾಗ ಪಕ್ಕದ ಮನೆಯಿಂದ ಮುದ್ದು ಮಗುವೊಂದು ನನ್ನತ್ತ ಬರತೊಡಗಿದೆ. ಕೈಚಾಚಿ ಎತ್ತಿಕೊಂಡು ಮುತ್ತಿಟ್ಟೆ. ಏನೋ........ ಏನೋ ಮಧುರಯಾತನೆ ಅನಂತವಾಗಿ ಕಾಡುತ್ತಿದ್ದ ಕ್ಲೇಶಗಳೆಲ್ಲಾ ಎಲ್ಲೋ ನುಸುಳಿ ಮಾಯವಾಗಿದ್ದವು. ಎಷ್ಟು ಹೊತ್ತು ಹೀಗೆ ಸಾಗಿತೋ.

"ಹಾಲು ಕುಡಿಯುವಂತೆ ಬಾ ಬೇಬಿ"

ನಾಚಿಕೆಯಾಯಿತು. ಮಗುವಿನ ತಾಯಿ ಸ್ವಲ್ಪದೂರದಲ್ಲಿಯೇ ನಿಂತಿದ್ದಾರೆ.

"ಕ್ಷಮೆ ಇರಲಿ, ಏನೋ ಅನ್ನಿಸಿತು. ಎತ್ತಿಕೊಂಡು ಬಿಟ್ಟೆ."

ಅಷ್ಟು ಹೇಳುವುದರಲ್ಲಿ ಸಾಕಾಗಿತ್ತು.

"ಛೇ ಅದಕ್ಕೆ ಕ್ಷಮೆ ಏಕೆ? ತಪ್ಪೇನು ?"

—ಹೀಗೆ ಪ್ರಾರಂಭವಾಗಿತ್ತು ನನ್ನ ಬೇಬಿಯ.ಜನ್ಮಾಂತರದ ಸೆಳೆತ. ಬೇಬಿಯ ತಂದೆ ಸೈನಿಕ ಖಾತೆಯಲ್ಲಿ ದುಡಿಯುತ್ತಿದ್ದಾರಂತೆ. ವರ್ಷಕ್ಕೊಮ್ಮೆ ರಜದ ಮೇಲೆ ಬಂದು ಹೋಗುತ್ತಾರಂತೆ.

ಕೆಲಸದ ಬೇನೆ ಮುಗಿದ ಕೂಡಲೇ ಕೋಣೆಗೆ ಬಂದನೆಂದರೆ ತೀರಿತು. ಮತ್ತೆ ಬೇಬಿಯೊಂದಿಗೆ ನಾನೂ ಬೇಬಿಯಾಗಿ ಈ ನಿಷ್ಠುರ ಜಗದ ಪರಿವೆಯನ್ನೇ ಮರೆತು ಬಿಡುವುದು.

"ನಿನ್ನ ಅಮ್ಮ ವಿಷಮಶೀತ ಜ್ವರದಿಂದ ನರಳಿ....ಮುಂದೆ ಓದಲಾಗಲಿಲ್ಲ, ಅಪ್ಪಯ್ಯನಿಂದ ಬಂದ ಪತ್ರ ಕಂಡೂ ಹೃದಯ ಒಡೆಯದೆ ಉಳಿದಿದ್ದು ಒಂದು ಆಶ್ಚರ್ಯವೇ ಸರಿ.

ನನ್ನ ಅಮ್ಮ ನಾನು ಸಂಪಾದನೆ ಮಾಡಿ ತೆಗೆದುಕೊಡುವ ಸೀರೆ ತೊಟ್ಟುಕೊಳ್ಳದೆ ಹಾಗೆಯೇ ನಿರ್ಗಮನ ಹೊಂದಿದಳು.

ಜನ್ಮ ಜನ್ಮಾಂತರದ ರುಣ ಪರಿಹಾರವಾಗಬೇಕು ಎಂದರೆ, ಏನು ಮಾಡಬೇಕು ಎಂಬುದೇ ಯೋಚನೆಯಾಗಿದೆ. ಅಮ್ಮನ ನಿರ್ವಿಕಾರದ ಮುಖವೊಮ್ಮೆ ಕಣ್ಣು ಮುಂದೆ ಹಾದು ಹೋದಾಗ ಕಣ್ಣೀರು ಕಡಲಾಗಿ ಹರಿಯುತ್ತದೆ.

ನನ್ನ ಬೇಬಿ ಇಲ್ಲದೆ ಹೋಗಿದ್ದರೆ ನನಗೆ ಬದುಕಲು ಬೇಕಾದ ಕಾರಣವೇ ಇಲ್ಲ. ಶಾಂತಕ್ಕನ ಅಕ್ಕರೆ ನನಗೊಂದು ದಿಕ್ಕಾಗಿದೆ.

ಸುತ್ತಿ ಸುತ್ತಿ ಸಾಕಾದಾಗ ಕಡಲಕಡೆ ನಡೆಯುವುದು ಮರಳ ಮೇಲೆ ಮೈ ಚಾಚಿ ಮಲಗುವುದು. ಆ ನಿರ್ಮಲ ವಾತವರಣ ಬೆಂದ ಮನಕ್ಕೆ ಸ್ವಲ್ಪ ಮಟ್ಟಿನ ಶಾಂತಿ ಕೊಡುತ್ತದೆ. ಅಮ್ಮನ ತೊಡೆಯ ಮೇಲೆ ಮಲಗಿದ ಹಾಗೆ.

ದೊಡ್ಡ ನೌಕರಿ ಸಿಗುತ್ತದೆ.....ಅಪ್ಪಯ್ಯ ಸಿಲ್ಕ್ ಶರ್ಟ್ ಹಾಕಿಕೊಂಡು ನಡೆದಿದ್ದಾರೆ. ಲಕ್ಷ್ಮಿ ಕೆಂಪು ಜರಿಯ ಲಂಗ ಹಾಕಿಕೊಂಡು ಕುಣಿಯುತ್ತಿದ್ದಾಳೆ. ಅಮ್ಮ ಕಾಣುವುದೇ ಇಲ್ಲ ?

ಅಮ್ಮ.......ಎಲ್ಲಿದ್ದೀಯಮ್ಮ.......? ತಟ್ಟನೆ ಎಚ್ಚರವಾಗುತ್ತದೆ.

ಅಲ್ಲಿ ಮತ್ತೆ ಕೂರಲಾರದೆ ಕೋಣೆಯ ಕಡೆಗೆ ನಡಿಗೆ. ಬೇಬಿಗಾಗಿಯೇ ಕೋಣೆಗೆ ಬರುತ್ತೇನೆ. ನನ್ನ ಅನಂತ ಆಸೆ ಆಕಾಂಕ್ಷೆಗಳನ್ನೆಲ್ಲಾ ಹತ್ತಿಕ್ಕಿ ತನ್ಮಯ ಗೊಳಿಸುವ ಶಕ್ತಿ ಬೇಬಿಯಲ್ಲಿದೆ. ಕಿಲಕಿಲ ನಗುವ ಅವಳನ್ನು ಎತ್ತಿ ಮುತ್ತಿಟ್ಟರೆ ಅರ್ಧ ಶ್ರಮ ಪರಿಹಾರವಾಗಿ ಬಿಡುತ್ತದೆ.

ಇದು ಯಾವ ರೀತಿಯ ಬಂಧನವೆಂದು ನನಗೆ ಅರ್ಥವಾಗುವುದಿಲ್ಲ. ಪ್ರಕೃತಿಯನಿಗೂಢ ಮಮತೆ ಯಾವ ಒಂದು ಅಂಶದಲ್ಲಿ ಹುದುಗಿರುತ್ತದೋ, ಎಂದು ಬಲ್ಲವರಾರು ? ಬದುಕಲೇಬಾರದು ಎನ್ನುವವನಿಗೆ ಯಾವುದೋ ಒಂದು ಬಗೆಯ ಪ್ರಬಲ ಅಂಕುಶ ನೇತು ಬೀಳುತ್ತದ್ದಲ್ಲ ಎಂದು ಅಚ್ಚರಿಪಡುತ್ತೇನೆ. ಬೇಬಿ ಎಲ್ಲಿ ನಾನೆಲ್ಲಿ ? ಆದರೆ ಜನ್ಮಾಂತರದ ರುಣಾನುಬಂಧದ ಬೀಳು ಇಲ್ಲಿ ಗಾಢವಾಗಿ ಬೀಳಬೇಕೆ ?

ವರ್ಷ ಕಳೆದರೂ ನೌಕರಿ ಸಿಗಬಾರದು ಎಂದರೆ, ಜನ್ಮಾಂತರದ ಹಣೆಯ ಬರವಲ್ಲದೆ ಮತ್ತೇನು ? ಶಾಂತಕ್ಕನ ನೆರವು ಇಲ್ಲದೆ ಹೋಗಿದ್ದರೆ ? ನೆನೆಯಬಾರದು. ನೆನೆದರೆ ಹೃದಯದಲ್ಲಿ ವಿಪ್ಲವ ಏಳುತ್ತದೆ. ಊರಿನ ಯೋಚನೆಯಲ್ಲಿ ರಾತ್ರಿಗಳೆಲ್ಲಾ ಜಾಗರಣೆಗಳಾಗಿ ಪರಿಣಮಿಸುತ್ತವೆ.

ಮೂರು ನಾಲ್ಕು ದಿನಗಳಿಂದ ಬೇಬಿಗೇಕೋ ಸಣ್ಣಗೆ ಜ್ವರ ಕಾಣಿಸಿ. ಕೊಂಡಿದೆ. ಡಾಕ್ಟರ ದವಾಖಾನೆಯಿಂದ ನಾನೇ ಔಷಧಿ ತೆಗೆದುಕೊಂಡು ಬಂದಿದ್ದೇನೆ.

ಸಂಜೆಯಿಂದ ಎರಡು ಮೂರು ಸಾರಿ ಬೇದಿಯಾಗಿದೆ, ಏನೋ

ಅಂತಕ. ಡಾಕ್ಟರನ್ನು ಕರೆದು ತರಲು ಓಡಿದೆ. ಶಾಂತಕ್ಕ ಕಂಗೆಟ್ಟಿದ್ದಾಳೆ. ಮುಳು ಮುಳು ಅಳುತ್ತಾಳೆ. ಏನೆಂದು ಧೈರ್ಯ ಹೇಳಲಿ ?

ಬಂದ ಡಾಕ್ಟರು ಚುಚ್ಚುಮದ್ದು ಕೊಟ್ಟು ಹೋಗಿದ್ದಾರೆ. ಶಾಂತಕ್ಕ. ನನ್ನು ಸಮಾಧಾನ ಪಡಿಸುವುದೆ ದುಸ್ತರವಾಗಿದೆ. ಬೇಬಿ ಸಣ್ಣಗೆ ನರಳುತ್ತಿದ್ದಾಳೆ. ದಷ್ಟ ಪುಷ್ಟವಾಗಿ ಬೆಳೆದಿದ್ದ ನನ್ನ ಬೇಬಿ ಹೀರಿ, ಹಿಪ್ಪೆಯಾಗಿದ್ದಾಳೆ.

ನನಗೆ ಕೂತ ಜಾಗದಿಂದ ಏಳಲು ಕೂಡ ಭಯ. ಶಾಂತಕ್ಕ ಒಂದು ಕಡೆ, ನಾನೊಂದು ಕಡೆ. ಮತ್ತೊಮ್ಮೆ ಬೇಬಿಗೆ ಬೇಧಿಯಾಗಿ ಉಸಿರು ಕ್ಷೀಣವಾಗತೊಡಗಿದೆ ನನ್ನ ಹೃದಯ ಧಡ ಧಡ ಬಡಿದುಕೊಳ್ಳುತ್ತಿದೆ. ದೇವರೆ ನನ್ನ ಬೇಬಿಯನ್ನು ಬದುಕಿಸಿ, ನನ್ನನ್ನು ಬೇಕಾದರೆ ಒಯ್ಯಬಹುದು.

ವಿಮೋಚನೆಯಾಗಿದೆ. ನನ್ನ ಬೇಬಿಗೆ ವಿಮೋಚನೆಯಾಗಿದೆ. ಇಲ್ಲ, ಈ ಪ್ರಕೃತ್ತಿಯಲ್ಲಿ ಬದುಕ ಬೇಕಾದವರೂ ಬದುಕುವುದಿಲ್ಲ. ಪ್ರಕೃತಿಯ ಇದೊಂದು ರೀತಿಯ ವಿಶಿಷ್ಟ ವೈಪರಿತ್ಯ ಶಾಂತಕ್ಕನನ್ನು ಹೇಗೆ ಸಮಧಾನ ಪಡಿಸಲಿ ? ಎತ್ತಿ ಮುದ್ದಾಡಿದ ಈ ಕೈಯಿಂದಲೇ ಬೇಬಿಯನ್ನು ಮಣ್ಣಿನಲ್ಲಿ ಹುದುಗಿಸಿ ಬಂದಿದ್ದೇನೆ.

ಇದು ಯಾವ ರೀತಿಯ ಬಂಧನ ಎಂದು ನನಗೆ ಅರ್ಥವಾಗುವುದಿಲ್ಲ ಪ್ರಕೃತಿಯ ನಿಗೂಢ ಮಮತೆ ಯಾವ ಒಂದು ಅಂಶದಲ್ಲಿ ಎದ್ದು ಕಾಣುತ್ತದೆ. ಎಂದು ಬಲ್ಲವರಾರು ?

ಬದುಕಲೇ ಬಾರದು ಎನ್ನುವವರಿಗೆ ಯಾವುದೋ ಒಂದು ಪ್ರಬಲ ಅಂಕುಶ ನೇತು ಬೀಳುತ್ತದ್ದಲ್ಲ ಎಂದು ಅಚ್ಚರಿ ಪಡುತ್ತೇನೆ. ಆದರೆ ಜನ್ಮಾಂತರದ ರುಣಾನುಬಂಧನದ ಬೀಳುಗಳು ಎಲ್ಲೆಲ್ಲಿ ಬೀಳುತ್ತದೆ ಬಲ್ಲವರಾರು ?

ಸುದ್ದಿ ಕೇಳಿದ ಶಾಂತಕ್ಕನ ತಂದೆ ಬಂದು ಅವಳನ್ನು ಕರೆದುಕೊಂಡು ಹೋಗಿಯಾಗಿದೆ. ಆವಳ ಅನ್ನದ ಋಣಾನುಬಂಧ ಹೇಗೆ ಪರಿಹರಿಸಿಕೊಳ್ಳ ಬೇಕು. ಎಂಬುದೇ ಒಂದು ಸಮಸ್ಯೆಯಾಗಿದೆ.

"ಮಾವ........

ಝುಲ್, ಜಣ್ ಝುಲ್........

ನನ್ನ ಮುದ್ದು ಬೇಬಿ ಜೊಲ್ಲು ಸುರಿಸುತ್ತಾ ಗೆಜ್ಜೆಯಕಾಲುಗಳನ್ನು ತುಪು ತುಪು ಇಡುತ್ತಾ ನನ್ನ ಕೋಣೆಯತ್ತ ಓಡ್ಯೋಡಿ ಬರುವುದಿಲ್ಲ. ಕೂಸು ಮರಿ........ ಇಲ್ಲ. ಇನ್ನೂ ಮುಂದೆ ಇವೆಲ್ಲಾ ಕನಸು........ ಒಬ್ಬರನ್ನು ಬಂಧನದಲ್ಲಿ ಸಿಕ್ಕಿಸಿ ತಾನು ವಿಮೋಚನೆ ಹೊಂದಲು ಅವಸರವೇನಾಗಿತ್ತು ಈ ಬೇಬಿಗೆ ?

ಈಗ ಕೋಣೆಗೆ ನನ್ನನ್ನೊಯ್ಯುವ ಪ್ರಬಲವಾದ ಯಾವ ಅಯಸ್ಕಾಂತ ಶಕ್ತಿಯೂ ಇಲ್ಲ ಅನಂತವಾಗಿ ಹಬ್ಬಿವ ಕಡಲ ಮೇಲೆ ಬಿದ್ದುಕೊಂಡು ನಿರ್ವಿಕಾರವಾಗಿ ಎಷ್ಟು ಹೊತ್ತು ಬೇಕಾದರೂ ಏನಾದರೂ ಮಾಡ ಬಹುದು ?

ಕೈಯಿಂದ ಸಾಧ್ಯವಾಗುವ ಮಟ್ಟಿಗೂ ಮರಳಿನಲ್ಲಿ ಹಳ್ಳ ತೋಡುವುದು ಅದರಲ್ಲಿ ಆಸೆ, ಅಮಿಷಗಳನ್ನು ಪ್ರೀತಿ, ಮಮತೆ. ದ್ವೇಶಗಳನ್ನು ಅವುಕಿ ಮುಚ್ಚಿ ವಿಮೋಚನೆ ಹೊಂದಲು ಸಾಧ್ಯವಾದರೆ ? ಲಗುಬಗೆಯಿಂದ ಮತ್ತೆ ಗುಳಿಯನ್ನು ಮುಚ್ಚಿ ಬಿಡುವುದು.

"ಝುಲ್....ಜಣ್....ಝುಲ್

"ಮಾಮ........

ಅಗೋ ? ಮುದ್ದು ಬೇಬಿ, ಕಡಲ ತೆರೆಯ ಮೇಲೆ ಕುಳಿತುಕೈತಟ್ಟಿ ಕೂಗುತ್ತಿದ್ದಾಳೆ. ಈ ಬೇಬಿಗೇಕೆ ಇಷ್ಟು ಧೈರ್ಯಬಂದಿತು. ಬೇಡ ಬೇಬಿ ಅಲ್ಲಿ ಹೋಗಬೇಡ.

"ಮಾಮ........

"ಝುಲ್....ಕಣ್....ಝುಲ್

ಇನ್ನು ಒಂದು ಘಳಿಗೆ ತಡೆದರೆ ಮತ್ತೆ ಬೇಬಿ ದಕ್ಕುವುದಿಲ್ಲ. ಬಿಡಬಾರದು. ಬೇಬಿಯನ್ನು ಹಿಡಿದುಕೊಂಡು ಗಾಢವಾಗಿ ಅಪ್ಪಿಕೊಳ್ಳಬೇಕು. ಓ ಬೇಬಿ ಬಂದೇ ಓಡಬೇಡ........ಇಗೋ....ಬಂದೆ........

ಕಡಲು ಒಂದೇ ಸಮನೆ ಉಕ್ಕುತ್ತಾ ಭೋರ್ಗರೆಯ ತೊಡಗಿದೆ ಅದರಲ್ಲಿ ಎಷ್ಟು ಆಸೆ ಆಕಾಂಕ್ಷೆಗಳು, ರಾಗ ದ್ವೇಶಗಳನ್ನು ಪ್ರೀತಿ ವಿಶ್ವಾಸಗಳನ್ನು ಹೊತ್ತು ತುಯ್ಯುತ್ತಿವೆಯೋ ನೋಡಲು ಪೂರ್ಣಮಿಯ ಚಂದಿರನ ಬೆಳಕಿಗೂ ಸಾಧ್ಯವಾಗದೆ ವಿಮೋಚನೆಗೆ ಚಟಪಟಸುತ್ತಿವೆ.

# ಉತ್ಪಾತ

"ಕೆಸರು ; ಬಗ್ಗಡ. ಮನಸ್ಸು ತಿಳಿಯಾಗಲಾರದಷ್ಟು ರಾಡಿಯಾಗಿಹೋಗಿದೆ. ನೋಡಿದಾಗಲೆಲ್ಲಾ ಮೂಲೆ ಗುಂಪಾಗಿ ಮುದುಡಿಕೊಂಡ ಸುಪ್ತ ಕಾಮಾನೆಗಳು ಪುಡಿದು ನಿಲ್ಲುತ್ತವೆ. ಪರಸ್ತ್ರೀಯರ ಬಗ್ಗೆ ಹೀಗೆ ಹುಚ್ಚಾಪಟ್ಟೆ ಭಾವನೆಯನ್ನು ಹರಿಯಬಿಡಬಾರದು ಎಂದು ಹಲವಾರು ಬಾರಿ ನೆನದಿದ್ದಾಗಿದೆ. ಅವಳು ಇತ್ತಲಾಗಿ ಹೋಗುವ ಹತ್ತು ನಿಮಿಷ ಮುನ್ನವೇ ಕಿಟಕಿ ಮುಚ್ಚಿ, ಮುಂದೆ ಏಳಬಹುದಾದ ಮನದ ರಾಡಿಯನ್ನು ಕದಡದಂತೆ ಇಡಲು ಪ್ರಯತ್ನಿಸಿಯಾಗಿದೆ......."

# ೫

ಅನೇಕ ಬಾರಿ ಹೀಗಾಗಿದೆ. ಒಂದು ಸಾರಿಯಲ್ಲ ಎರಡು ಸಾರಿಯಲ್ಲ; ಹಲವಾರು ಸಾರಿ. ಮೂಲೆ ಗುಂಪಾಗಿ ಮುದುಡಿಕೊಂಡ ಸುಪ್ತಕಾಮೋನೆಗಳು ಪುಟಿದು ನಿಲ್ಲುತ್ತವೆ. ಅವಳ ನಿಲುವು ಆರೀತಿ ಇದೆ. ತೋಳಿಲ್ಲದ ಟೆರ್ರಿ ನೈಲಾನ್ ಜಾಕೇಟ್ ಉಬ್ಬಿನಿಂತ ಎದೆಗೆ ತಿಲಕ ಪ್ರಾಯವಾಗಿದೆ. ಬಿಗಿಯಾಗಿ ತೊಟ್ಟ ಉಡುಪು ಎನೋ ಎನೋ ಬಯಕೆ ಹುಟ್ಟಿಸುತ್ತವೆ. ಜಾಲರಿಯಿಂದ ಕಮಾಲು ಮಾಡಿ ಕಟ್ಟಿದ ಕೂದಲು ಮತ್ತೇನೋ ನೆನಪಿಗೆ ತರುತ್ತವೆ.

ಪರಸ್ತ್ರೀಯರ ಬಗ್ಗೆ ಹೀಗೆ ಹುಚಾಪಟ್ಟೆ ಭಾವನೆಯನ್ನು ಹರಿಯಬಿಡಬಾರದು ಎಂದು ಹಲವಾರು ಬಾರಿ ನೆನದದ್ದಾಗಿದೆ. ಅವಳು ಇತ್ತಲಾಗಿ ಹೋಗುವ ಹತ್ತು ನಿಮಿಷ ಮುನ್ನವೇ ಕಿಟಕಿ ಮುಚ್ಚಿ ಮುಂದೆ ಏಳಬಹುದಾದ ಮನದ ರಾಡಿಯನ್ನು ಕದಡದಂತೆ ಇಡಲು ಪ್ರಯತ್ನಿಸಿಯಾಗಿದೆ.

ಆದರೆ ?

ಯಾವಾಗಲೋ ಏನೋ ಮತ್ತೆ ಕಿಟಕಿಯ ಬಾಗಿಲು ತೆಗದಿರುತ್ತದೆ. ಕಣ್ಣು ದೂರ ಬಹು ದೂರ ಹರಿದಾಡಿ ಏನನ್ನೋ ಅರಿಸುತ್ತಿರುತ್ತದೆ. ಮತ್ತೊಮ್ಮೆ ಕೈ ಗಡಿಯಾರದತ್ತ ದೃಷ್ಟಿ. ಹತ್ತು ಗಂಟೆಗೆ ಆರು ನಿಮಿಷವಿದೆ ........ಇಲ್ಲ........ಐದು........ಇಲ್ಲ ಎರಡು........ಥಣ್ ! ಹತ್ತು.

ದೂರದ ತಿರುವಿನಲ್ಲಿ ಅದೇ ಹೆಣ್ಣು. ಕಟ್ಟು ಮಸ್ತಾದ ಸುಂದರ ಹೆಣ್ಣು ಬಳುಕುತ್ತಾ ಬರುತ್ತಿದ್ದಾಳೆ. ಹಣೆಯ ತಿಲಕದ ಕೆಂಪು ಅಧರದೊಂದಿಗೆ ಸ್ಪರ್ಧೆ ಹೂಡಿದಂತಿದೆ. ಅವಳ ಒಂದೊಂದು ಹೆಜ್ಜೆಯು ಹೃದಯದ ಕಾದ ತಮಟೆಯ

ಮೇಲೆ ಡುಬ್ಬು ಡುಬ್ಬು ಭಾರಿಸಿದಂತೆ ಆಗುತ್ತದೆ. ಉಸಿರು ಹಿಡಿದು ಹಿಡಿದು ಬಿಡಬೇಕಾಗುತ್ತದೆ.

ಆಕೆ ದಾರಿಗುಂಟಾ ಸಾಗಿ ಕಣ್ಣು ಮರೆಯಾದ ಮೇಲೆ ನಿರ್ಜನವಾಗಿ ಕಾಣುವ ರಸ್ತೆಯನ್ನೊಮ್ಮೆ ಶೂನ್ಯವಾಗಿ ನಿಟ್ಟಿಸಿ ಕಿಟಕಿಯ ಬಾಗಿಲು ಬಡಿದು ಬಂದು ಕುರ್ಚಿಯಲ್ಲಿ ಕುಕ್ಕರಿಸಿ ಕ್ಯಾಕರಿಸುವುದು.

ಕೆಸರು ; ಬಗ್ಗಡ. ಮನಸ್ಸು ತಿಳಿಯಾಗಲಾರದಷ್ಟು ರಾಡಿಯಾಗಿ ಹೋಗಿದೆ. ಮೇಜಿನ ಮೇಲಿದ್ದ ಸಿಗರೇಟು ತೆಗೆದು ತುಟಿ ಗಂಟಿಸಿ ಕಡ್ಡಿ ಗೀರಿ ನಿಧಾನವಾಗಿ ಹೊಗೆ ಎಳೆದು ಬಿಡುವುದು. ಅದರೊಂದಿಗೆ ಅಸಾಹಾಯಕತೆಯ ಅಪಸ್ವರ ತೂರಿ ತೂರಿ ಹೋಗುತ್ತದೆ. ಕಾಣದ ಯಾವುದೋ ಅವ್ಯಕ್ತ ಬಯಕೆಯೊಂದು ತಲೆಕೆದರಿಕೊಂಡು ಹೃದಯದ ನರನಾಡಿಗಳನ್ನೆಲ್ಲಾ ಮೀಟಿ ಮೀಟಿ ಅಪಸ್ವರದಲ್ಲಿ ಹಾಡಿಕೊಳುತ್ತದೆ.

ಅನೇಕ ರಂಗು ರಂಗಿನ ಹುಡುಗಿಯರನ್ನು ಕಂಡ ಈ ಕಣ್ಣಿಗೆ, ಆಗ ಕಾಣದ ವಿಕಾರ ಇವಳನ್ನು ಕಂಡಾಗ ತೆಕ್ಕೆ ಬಿದ್ದು ಲಾಗ ಹಾಕಿ ಅಂಗತನಾಗಿ ಬೀಳತೊಡಗುತ್ತವೆ. ಈ ಪ್ರವಾಹದಲ್ಲಿ ಅಸಾಹಾಯಕತೆಯಿಂದ ತರಗೆಲೆಯಂತೆ ತೇಲಿ ಹೋಗ ಬೇಕಾಗುತ್ತದೆ.

ಏನಾದರೂ ಮಾಡಿ ಇದನ್ನು ತಪ್ಪಿಸಲೇಬೇಕು. ಇಲ್ಲ, ಅವಳು ದಕ್ಕುವುದಿಲ್ಲವೆಂದು ಆಸೆ ಬಿಟ್ಟು ಸುಮ್ಮನಾಗಬೇಕು ; ಇಲ್ಲವೇ ಏನಾದರೂ ಮಾಡಿ ಸ್ನೇಹ ಬೆಳಸಬೇಕು

ಮರೆತು ಬಿಟ್ಟರೇ ? ಜೀವ ಹೋದರೆ ಹೇಗಿರುತ್ತದೆ ಎಂದು ಕೇಳಿದರೆ ? ಮರೆಯುವ ಸಂಗತಿಯಾಗಿದ್ದರೆ ಈ ಪಾಡು ಪಡಬೇಕಿತ್ತೆ ? ಸ್ನೇಹ ಬೆಳೆಸಬೇಕು. ಮನದ ತುಡಿತ ತೋರಿಸಿ ಕೊಡಬೇಕು.

ಹೇಗಾದರೂ ಮಾಡಿ ದಕ್ಕಿಸಿಕೊಳ್ಳಬೇಕು. ಪ್ರಯತ್ನ ಪಡಬೇಕು. ದಕ್ಕದೆ ಹೋದರೆ ? ಅಂತರಾಳದಲ್ಲಿ ಕತ್ತಿಯಾಡಿಸಿದಂತೆ ಆಗುತ್ತದೆ. ಥತ್ ! ಇದಕ್ಕೇನಾದರೂ ದಾರಿ ಮಾಡಲೇಬೇಕು. ತಲೆ ಓಡುವುದಿಲ್ಲ. ಮೈಯಲ್ಲಾ ಭಾರ. ಎರಡು ಗ್ಲಾಸ್ ಬೀರು ಖಾಲಿ. ಮತ್ತೆ ಸಿಗರೇಟು. ಕಡ್ಡಿ ಗೀರುವುದು. ಹೊಗೆ. ವೃತ್ತಾಕಾರವಾಗಿ ಹರಡಿಕೊಳ್ಳುವ ಹೊಗೆ.

ಢಣ್ ! ಒಂದರ ಮೇಲೊಂದರಂತೆ ಐದು ಬಾರಿಸಿದೆ. ಮತ್ತೆ ಕಿಟಕಿಯ

ಬಾಗಿಲು ತೆಗೆದು ನಿಲ್ಲುವುದು ಹದಿನೈದು ಅಥವಾ ಇಪ್ಪತ್ತು ನಿಮಿಷಗಳು, ಅಷ್ಟೆ. ಮುಖ ಸ್ವಲ್ಪ ಬಾಡಿದ್ದರೂ ಅದರ ಪ್ರಖರ, ಕಾಂತಿ ಕುಂದಿಲ್ಲ. ಅದೇ ವಯ್ಯಾರದ ನಡಗೆ ; ಹೃದಯದಲ್ಲಿ ಅದೇ ಬಡಿತ.

ಶೂನ್ಯ. ಹೃದಯದಲ್ಲಿ ಮತ್ತೆ ಅದೇ ಅಸಾಹಾಯಕತೆಯ ಶೂನ್ಯ.

"ಯಾರನ್ನು ನೋಡುತ್ತಿದ್ದೀಯಾ ?"

ಪರಿಚಯದ ಧ್ವನಿ. ತಿರುಗಿನೋಡಲು ಸಹ ಬೇಸರ. ಕಿಟಕಿಯ ಕಂಬಿಗೊತ್ತಿದ ಮುಖ ಹಾಗೆಯೇ. ರಸ್ತೆಯಲ್ಲಿ ಅಷ್ಟು ಗದ್ದಲವಿದ್ದರೂ ಅಲ್ಲಿ ಕಾಣುವುದು ಶೂನ್ಯ.

ಸ್ನೇಹದ ಮಮಕಾರ. ಬೆನ್ನ ಮೇಲೆ ನಿಧಾನವಾಗಿ ಕೈ ಆಡಿಸಿದಾಗ ಸ್ವಲ್ಪ ಮಟ್ಟಿಗೆ ಹಾಯ್ ಎನಿಸುವುದು. ನಿಂತು ಪ್ರಯೋಜನವಿಲ್ಲ. ನಿಂತು ನಿಂತು ಕಾಲು ಜುಂ ಹಿಡಿದು ಹೃದಯದೊಂದಿಗೆ ಮಣಗಟ್ಟಲೇ ಭಾರವಾಗಿ ಬಿಟ್ಟಿದೆ.

"ಏನೋ ಗಾಢವಾಗಿ ಆಲೋಚಿಸುತ್ತಿರುವಂತಿದೆ." ಸೈಯದ್ ಸೆಕೆಂಡ್ ಹ್ಯಾಂಡ್ ವ್ಯಾಪಾರದಲ್ಲಿ ಎಷ್ಟು ಗಟ್ಟಿಗನೋ, ಮಾತನಾಡುವುದ ರಲ್ಲಿ ಅಷ್ಟೇ ಕುಶಲಿ. ಮಾತನಾಡದಿದ್ದರೆ ವ್ಯಾಪಾರ ಹೇಗೆ ನಡೆದೀತು ?

"ಲೋ ಸಾಬಿ ಒಂದು ಸಹಾಯ ಮಾಡುತ್ತೀಯಾ ?" ಅಂಗಲಾ ಚುವ ಅಭ್ಯಾಸ ಬೆಳಸಿ ಕೊಳ್ಳಬೇಕು. ಸಮಯಕ್ಕೆ ಉಪಯೋಗ ವಾಗುತ್ತದೆ !

"ಹತ್ತಾರು ಜನಕ್ಕೆ ಸಾಲ ಕೊಡೋ ಬ್ಯಾಂಕರ್ ಡಿಸೋಜನಿಗೆ ಸಹಾಯವೆ ?" ಸಾಬಿ ಮುಖವನ್ನೇ ಆಶ್ಚರ್ಯ ಚಿಹ್ನೆಯನ್ನಾಗಿ ಮಾಡಿ ತಲೆ ಕೆರೆದುಕೊಂಡು ಕೇಳಿದ. ಥತ್ ಕೊಳಕು ಬಡ್ಡೀ ಮಗ. ಒಂದೊಂದು ಸಾರಿ ಮುಖ ನೋಡಲು ಕೂಡ ಅಸಹ್ಯವಾಗುತ್ತದೆ.

"ಹೌದು."

"ಹೇಳು ?"

"ಈಗಲ್ಲ. ನಾಳೆ ಸರಿಯಾಗಿ ಹತ್ತು ಗಂಟೆಗೆ ಬಾ. ಹೇಳು ತ್ತೇನೆ."

ಸ್ವಭಾವವನ್ನು ಚೆನ್ನಾಗಿ ಅರಿತವನು ಸಾಬಿ. ಸಿಗರೇಟು ಹಚ್ಚಿ ಮತ್ತೊಂದನ್ನು ಕೈಯಲ್ಲಿ ಹಿಡಿದುಕೊಂಡು ಹೊರ ನಡೆದ.

ಮದುವೆಯಾದ ಹಾಗೆ ಕಾಣುವುದಿಲ್ಲ. ಯಾವ ಜಾತಿಯಾದರೇನು? ಕಿಚ್ಚಿಕ್ಕಲಿ ಜಾತಿಗೆ. ಅವಳೊಂದಿಗೆ ಸ್ನೇಹ ಬೆಳಸಿಕೊಳ್ಳಬೇಕು. ಎಷ್ಟು ದುಡ್ಡು ಇದಕ್ಕಾಗಿ ಖರ್ಚಾದರೂ ಸರಿಯೇ. ಬಿಡಲಾರದ ನಂಟು ಹಾಕಿಕೊಳ್ಳಬೇಕು. ವಿರಹದ ಬೇಗುದಿಯಿಂದ ತಪ್ತಗೊಂಡ ಮನಸ್ಸನ್ನು ಸಂಬಾಳಿಸಲು, ಅವಳನ್ನು ಬಲವಾಗಿ ಅಪ್ಪಿಕೊಂಡು ಕಣ್ಣುಮುಚ್ಚಿಕೊಳ್ಳಬೇಕು.

ಆದರೆ ?

ಯೋಚನೆ ಅನುಮಾನದ ಚಕ್ರಕ್ಕೆ ಸಿಕ್ಕಿ ಪುಡಿ ಪುಡಿಯಾಗಿ ಬಿಡುತ್ತದೆ. ಅರಿವಿಲ್ಲದಂತೆಯೇ ಬೆವರು ಹನಿ ಹನಿಯಾಗಿ ಹಣೆಯಿಂದ ಜಾರಿಕೊಳ್ಳುತ್ತವೆ. ಅಷ್ಟರಲ್ಲಿ ಸಾಬಿಯ ಪ್ರವೇಶವಾಗುತ್ತದೆ.

"ಒಳಗೆ ಬಾ ಸೈಯದ್ : ನಿನಗಾಗಿಯೇ ಕಾಯುತ್ತಿದ್ದೆ.?

"ಹತ್ತು ಗಂಟೆಗೆ ಇನ್ನು ಹತ್ತು ನಿಮಿಷವಿದೆ." ಗಡ್ಡವನ್ನು ಕೂಡ ಬೋಳಿಸದೆ ಸಾಬಿ ಬಂದು ಬಿಟ್ಟಿದ್ದಾನೆ. ಮೊದಲೇ ಕೊಳಕು. ಈಗ ಹೇಳುವುದೇನಿದೆ.

ರಸ್ತೆಯ ಮುಖಕ್ಕೆ ನಿಂತ ಕಿಟಕಿಯ ಬಾಗಿಲು ತೆಗೆದು ತೆರೆ ಸರಿಸಿ ರಸ್ತೆಯ ತುದಿಯತ್ತ ಕೈ ಚಾಚಿಯಾಗಿದೆ. ಕೈಯನ್ನೇ ಅನುಸರಿಸಿದ ಸಾಬಿ, ಬೆರಳು ತೋರಿವತ್ತ ನೋಡಿದ.

ಹತ್ತು ಗಂಟೆಗೆ ನಾಲ್ಕು ನಿಮಿಷವಿರಬಹುದು. ಆಗೋ. ಹೃದಯದಲ್ಲಿ ಮತ್ತೆ ಎಣೆ ಕಾಣದ ಸಂಕಟ. ನೋಡಿದ ಸಾಬಿ ಕಿಸ್ಸನೆ ನಕ್ಕು ಒಳ ಬಂದು ಕುಳಿತ. ರಸ್ತೆಯ ತುದಿಯವರೆಗೂ ಓಡಿತ್ತು ನೋಟ. ಪುನಃ ಅದೇ ಅಸಾಹಾಯಕತೆಯ ಬೇಗೆ.

ಕಿಟಕಿಯ ತೆರೆ ಮತ್ತೆ ಸರಿದಾಡಿತು. ಕಿಟಕಿ ಪಟ್ ಎಂದು ಮತ್ತೆ ಮುಚ್ಚಿಕೊಂಡಿತು. ಮತ್ತೆ ಎರಡು ಗ್ಲಾಸು ಬೀರು ಖಾಲಿ. ಸಿಗರೇಟು, ಕಡ್ಡಿ ಗೀರುವುದು. ಹೊಗೆ. ವೃತ್ತಾಕಾರವಾದ ಹೊಗೆ,

"ನೋಡಿದೆಯಾ ಸಾಬಿ ?"

"ಇದನ್ನು ನೋಡಲು ತಾನೆ ನೀನು ಕರೆದಿದ್ದು ?"

ವಿಷಯವನ್ನು ಎಷ್ಟು ಹಗುರವಾಗಿ ತೆಗೆದುಕೊಳ್ಳುತ್ತಾನೆ ಈ ಸಾಬಿ? ಶರ್ಟಿನ ಕಾಲರು ಹಿಡಿದು ಎರಡು ಬಾರಿಸಬೇಕು. ಮನದ ಹಾಲಹಲ ಈ ಸಾಬಿಗೇನರ್ಥವಾಗಬೇಕು.

"ಹೌದು. ನೋಡಿದೆಯಾ ?"

"ಇಂದೇನು ನೋಡುವುದು ? ಹಿಂದೆಯೇ ನೋಡಿದ್ದೇನೆ."

"ಅಂ ! ಏನಂದೆ ?"

"ಅವಳ ಪರಿಚಯ ನನಗಿದೆ."

ಈಗ ಹೃದಯದ ಒಡಿತ ಪಕ್ಕದಲ್ಲಿದ್ದವರಿಗೆ ಕೇಳಿದರೆ ಆಶ್ಚರ್ಯವಿಲ್ಲ. ಸಾಬಿ ತಿಳಿದ ಸಂಗತಿ ಹೇಳಲು ಕೂಡ ಎಷ್ಟು ಸತಾಯಿಸುತ್ತಾನೆ.

"ಅವಳ ಬಗ್ಗೆ ನಿನಗೇನು ಗೊತ್ತಿದೆ ; ಎಲ್ಲಾ ಹೇಳಿಬಿಡು."

"ಹೆಸರು ಮೇರಿ. ಫ್ಯಾನ್ಸಿ ಗಿಫ್ಟ್ ಸೆಂಟರ್‌ನಲ್ಲಿ ಸೇಲ್ಸ್ ಮನ್ ಆಗಿದ್ದಾಳೆ. ಮನೆ ಇರುವುದು ಹಾರ್ಡಿಂಜ್ ರಸ್ತೆಯಲ್ಲಿ !"

"ನಿನಗೇನಾದರೂ ಸಂಬಂಧ ?"

"ಖುದಾ ಅಲ್ಲಾ. ಚೆನ್ನಾಗಿ ಪರಿಚಯವಿದೆ ಡಿಸೋಜ. ಮತ್ತೇನು ಸಂಬಂಧವಿಲ್ಲ."

ಅರ್ಥವತ್ತಾಗಿ ಹೇಳಿದ ಸಾಬಿ ಸಣ್ಣಗೆ ಶಿಳ್ಳು ಹೊಡೆದು ತಲೆಯ ಮೇಲಿನ ಟೋಪಿ ತೆಗೆದು ಕೆರೆದುಕೊಂಡು ನಕ್ಕುಬಿಟ್ಟ. ಘಾಟಿ ಸಾಬಿ.

"ಮದುವೆಯಾಗಿದೆಯಾ ?"

"ಒಬ್ಬಳೇ ಇರುವ ಹಾಗೆ ಕಾಣುತ್ತಾಳೆ."

"ಅವಳ ಪರಿಚಯ ಮಾಡಿ ಕೊಡು ಸಾಬಿ"

"ಆಗಲಿ."

"ಎಂದು ?"

"ನಾಳೆಯೇ, ನಾಳೆ ಗಿಫ್ಟ್‌ಸೆಂಟರ್‌ನಲ್ಲಿ ಏನಾದರೂ ಕೊಂಡುಕೊಳ್ಳುತ್ತೀರು. ಟೈಂ ನೋಡಿ ಪರಿಚಯ ಮಾಡಿಕೊಡುತ್ತೇನೆ."

"ಜನ ಹೇಗೆ ?"

"ಅಂದರೆ ?"

ಥತ್, ಸೂಕ್ಷ್ಮ ಅನ್ನುವುದೇ ಇಲ್ಲ ಇದಕ್ಕೆ.

"ಜನ ಹೇಗೆ ಅಂದೆ ?"

"ಅಹ್. ಸೋಶಿಯಲ್ ! ವೆರಿ ಸೋಶಿಯಲ್. ಫ್ರೆಂಡ್ಲಿ."

"ತಗೋ ಮಗನೆ ಕುಡಿ. ಮಜಾಮಾಡು." ಪ್ಲೇಯರ್ಸ್ ಸಿಗರೇಟಿನ ಪ್ಯಾಕನ್ನು ಟೇಬಲಿನ ಡ್ರಾದಿಂದ ಎಳೆದು ಸಾಬಿಯ ಮುಂದೆ ಎಸೆದಾಗ ಅವನ ಮುಖ ನೋಡಬೇಕು !

ಫ್ಯಾನ್ಸಿ ಗಿಫ್ಟ್ ಸೆಂಟರಿನಲ್ಲಿ ಡಿಸೋಜ ಸುಮಾರು ಬೆಲೆಯ ಪದಾರ್ಥಗಳನ್ನು ಕೊಂಡ. ಅವಳು ತೋರಿಸಿದ್ದನ್ನೆಲ್ಲಾ 'ಎಸ್' ಎಂದುಬಿಡುತ್ತಿದ್ದ. ಕಣ್ಣಿನಲ್ಲಿಯೇ ಅವಳನ್ನು ತುಂಬಿ ಕೊಳ್ಳುತ್ತಿದ್ದ. ಪಕ್ಕದಲ್ಲಿ ನಿಂತಿದ್ದ ಸೈಯದ್ ಹೇಳಿದ.

"ಓ ಮರೆತಿದ್ದೆ, ನೋಡಿ ಮೇರಿ; ಇವರು ಮಿ|| ಡಿಸೋಜ ಎಂದು ಹೇಳಿ. ಬ್ಯಾಂಕರ್"

"ನಮಸ್ತೆ."

ತಲೆ ಗಿರ್ ಎಂದು ಒಮ್ಮೆ ಸುತ್ತಿದಂತಾಯಿತು.

ಇವರು ಮಿಸ್, ಮೇರಿ. ನನ್ನ ಅಂಗಡಿಗೆ ಸೆಕೆಂಡ್ಸ್ ಬರುವುದು ಇಲ್ಲಿಂದಲೇ."

ಏನು ಹೇಳುವುದು ? ಮಾತು ಬಂದರಲ್ಲವೇ ಡಿಸೋಜ ಆಡುವುದು. ಬಿಲ್ಲು ತೆತ್ತು ಬರುವಾಗ ಧೈರ್ಯಮಾಡಿ ಡಿಸೋಜ ಹೇಳಿಯೇಬಿಟ್ಟ. 'ನಮ್ಮಲ್ಲಿಗೆ ನಾಳೆ ನೀವು ಟೀಗೆ ಬರಬೇಕು.'

"ಅದಕ್ಕೇನಂತೆ, ಆಗಲಿ." ನಕ್ಕು ಅವಳು ಒಮ್ಮೆಯೇ ಒಪ್ಪಿಕೊಂಡು ಬಿಟ್ಟಳು.

ರಾತ್ರೆಯಿಡಿ ಡಿಸೋಜನಿಗೆ ನಿದ್ದೆಯಿಲ್ಲ. ಎಷ್ಟು ಹೊತ್ತಿಗೆ ಬೆಳಗಾದೀತು ಎಂದು ಲೆಕ್ಕ ಹಾಕುತ್ತಾ ಹಾಸಿಗೆಯ ಮೇಲೆ ಹೊರಳಾಡಿದ. ಹೊರಳಾಟ ಅಸಹ್ಯವಾದಾಗ ಏಳುವುದು. ಬೀರ್ ಬಗ್ಗಿಸಿಕೊಳ್ಳುವುದು. ಕಡ್ಡಿ ಗೀರುವುದು. ಸಿಗರೇಟು ಹತ್ತಿಸಿಕೊಳ್ಳುವುದು ? ಹೊಗೆ. ಮತ್ತೆ ವೃತ್ತಾಕಾರವಾದ ಹೊಗೆ.

ಮುಂದೆ ಅವಳೊಡನೆ ಹೇಗೆ ವರ್ತಿಸುವುದು ? ಒಮ್ಮೊಮ್ಮೆ ಮನದ

ಬಯಕೆ ಹೇಳಿಬಿಡುವುದೆ ? ಕೋಪಗೊಂಡು ಉಗಿದು ನಡೆದು ಬಿಟ್ಟರೆ ? ಇಷ್ಟುದಿನ ಪಟ್ಟ ಶ್ರಮಕ್ಕೆ ಬೆಂಕಿ ಬೀಳಲಿ, ಆದರೆ ಹೃದಯವೇ ಕಿತ್ತು ಬರುತ್ತದೆ ಅವಳು ಹೋಗಿಬಿಟ್ಟರೆ, ಉಪಾಯದಲ್ಲಿಯೇ ಸಾಧಿಸಿಕೊಳ್ಳಬೇಕು.

ಏನೂ ಹೇಳಿದರೂ ಚೊಕ್ಕವಾಗಿ ಮಾಡುತ್ತಾನೆ ಈ ಹುಡುಗ ರಾಜು ಇವನು ಕೆಲಸಕ್ಕೆ ಬಂದು ವರ್ಷ ಕೂಡ ಆಗಿಲ್ಲ. ಆಗಲೇ ಮನೋಗತವನ್ನು ಅರಿತು, ಮಾಡುವ ನಿಪುಣತೆ ಸಾಧಿಸಿಕೊಂಡಿದ್ದಾನೆ. ಮುಂಜಾನೆಯೇ ಮಧ್ಯಾಹ್ನದ 'ಟೀ'ಗೆ ತಕ್ಕ ಏರ್ಪಾಡು ಮಾಡಲು ಹೇಳಿಯಾಗಿದೆ. ಅವನು ಮಾಡುವಾಗ ಸ್ವಲ್ಪ ಉಸ್ತುವಾರಿ ನಡೆಸಿಬಿಟ್ಟರೆ ತೀರಿತು •

ಮೂರರ ವೇಳೆಗೆ ಸೈಯದ್ ಸಾಬಿ ಹಾಜರ್.

"ಏನಯ್ಯಾ ಸಾಬಿ ? ಅವಳು ಬರುತ್ತಾಳೆತ್ತಾನೆ ?"

"ಭರ್ಜರಿ ಏರ್ಪಾಡು ಮಾಡಿದಂತಿದೆ." ಡೈನಿಂಗ್ ಟೇಬಲಿನ ಮೇಲಿನ ಸಿದ್ಧತೆಯನ್ನು ಗಮನಿಸಿದ ಸಾಬಿ ಕೇಳಿದ.

"ಬರುತ್ತಾಳೆನಯ್ಯಾ!"– ಸಾಬಿಗೆ ತಿನ್ನುವ ಯೋಚನೆ.

"ಐದರ ವೇಳೆಗೆ ಬರುತ್ತಾಳಂತೆ. ನಾನೆ ಹೋಗಿ ಕರೆದು ಕೊಂಡು ಬರುತ್ತೇನೆ."

"ಈಗ ಮೂರುವರೆ. ನಡಿ, ಅಲ್ಲೇ ಇದ್ದು ಕರೆದುಕೊಂಡು ಬಾ ಪ್ಲೀಸ್, ಹೋಗು."

ಟೇಬಲಿನ ಡ್ರಾ ಎಳೆದು ಸಿಗರೇಟು ಪಾಕ್‌ನ್ನು ತೆಗೆದು ಜೇಬಿಗೆ ಸೇರಿಸಿ ಹೊರ ನಡೆದ.

ಕಾಲ ಎಷ್ಟು ಮಂದವಾಗಿದೆ ? ಇಲ್ಲಿ, ಮನದಲ್ಲಿ ಆಕಾರ ವಿಕಾರಗಳ ಸಂತೆ ನಡೆದಿದ್ದರೂ ಕಾಲ ನಿರ್ವಿಕಾರವಾಗಿ ಸಾಗಿದೆ.

ಅವಳು ಬರುತ್ತಾಳೆಯೋ ಇಲ್ಲವೋ. ಐದಾಗಿ ಹತ್ತು ನಿಮಿಷವಾದರೂ ಸುಳಿವೇ ಇಲ್ಲ. ಮನದಲ್ಲಿ ಏನೋ ಉದ್ವೇಗ ನೆನೆದಾಗ ಢವ್ ಎನಿಸುತ್ತದೆ. ಕಿಟಕಿಯಬಳಿಗೆ ಹೋಗಿ ಪರದೆ ಸರಿಸಿ ಮುಖವಿಟ್ಟು ಹೆಬ್ಬಾವಿನಂತೆ ಜಡವಾಗಿ ಮಲಗಿದ್ದ ದಾರಿಯನ್ನು ದಿಟ್ಟಿಸಿ ನೋಡುವುದು. ಇಂದು ಬರಲು ಸಾಧ್ಯವಿಲ್ಲ ಎಂದು ಬಿಟ್ಟಳೋ ಏನೋ ?

ಮನೆಯ ಮುಂದೆ ಟ್ಯಾಕ್ಸಿ ಬಂದು ನಿಂತಿತು. ಹೃದಯ ಭರತ ನಾಟ್ಯ

ವಾಡ ತೊಡಗಿದೆ. ಈಗ ಕಿಟಕಿಯನ್ನು ಪಟ್ ಎಂದು ಬಡಿದು ಒಳಸೇರ ಬೇಕಾಗಿಲ್ಲ. ಬಾಗಿಲ ಬಳಿಯೇ ಹೋಗಿ ಬಹು ಹಿತವಾಗುವಂತೆ ಆಹ್ವಾನಿಸ ಬೇಕು.

"ಬನ್ನಿ ಒಳಗೆ"

"ನಮಸ್ತೆ."

ಹಸನ್ಮುಖಿ. ಚಂದ್ರ ಫಕ್ಕನೆ ನಕ್ಕು ಭೂಮಿಗೆ ಬಿದ್ದಂತೆ ಆಗುತ್ತದೆ. ಒಳಬೇಗುದಿಗಳೆಲ್ಲಾ ಕರಗಿ ಹೋಗ ತೊಡಗಿವೆ. ಇನ್ನು ಸುಖಿಯಾಗಿರ ಬಹುದು. ಹಣೆಯ ಮೇಲಿನ ಬೆವರನ್ನು ಹಾಗೆಯೇ ಕರ್ಚಿಪಿನಲ್ಲಿ ಒರಸಿ ಕೊಳ್ಳಬೇಕು.

ಮುಂದಲ ಕೋಣೆಯ ಸೋಫದಲ್ಲಿ ಕುಳಿತ ಆಕೆಯೊಂದಿಗೆ ಫ್ರೆಂಡ್ಲಿ ಯಾಗಿ ಏನಾದರೂ ಮಾತನಾಡಬೇಕು. ಏನಾದರೂ ಸರಿಯೇ ! ಏನು ಮಾತನಾಡುವುದು ?

"ನಿಮ್ಮ ಪರಿಚಯವಾದದ್ದು ನನಗೆ ಬಹಳ ಸಂತೋಷ ಉಂಟು ಮಾಡಿದೆ"

ಪದಗಳು ಏರುಪೇರು ಉಸಿರು-ಹತ್ತಿಹೋಗುವ ಸಖೆ. ರಂ ಢಂ ರಂ ಎಂದು ಯಾರೋ ಹೃದಯಲ್ಲಿ ಅವಿತು, ತಮಟೆಯ ಚರ್ಮ ಹರಿದು ಹೋಗು ವಂತೆ ಭಾರಿಸುತ್ತಿರುವಂತಿದೆ.

"ನಿಮ್ಮ ಸ್ನೇಹ ಪರತಿ ದೊಡ್ಡದು. ನಿಮ್ಮ ಶ್ರೀಮಂತಿಕೆಗೆ ಈ ಗುಣ ಮೆರಗು ಕೊಟ್ಟಿದೆ"

ನಿಧಾನವಾಗಿ ತೊರೆಯ ನೀರು ಜುಳು ಜುಳು ಹರಿದಂತೆ ಮಾತು ಮಲ್ಲಿಗೆಯಂತೆ. ಬಹು ಮಧುರ ; ಬಹು ಸುವಾಸನೆ.

"ಹೆ........ಹ್ಹೆ........

"ಇವರು ಜೀವನದಲ್ಲಿ ಬಹಳ ಕಹಿ ಉಂಡವರಂತೆ."– ಸಾಬಿ ಹೇಳಿದ.

"ಹೌದೇನು ?"

ಒಂದು ಕ್ಷಣ ಆವಳ ಮುಖದಲ್ಲಿ ಮೋಡ ಕಟ್ಟಿದಂತಾಯಿತು. ಅಷ್ಟೆ ; ಮತ್ತೆ ಆವಳ ಸೂಸು ನಗೆಯ ಬೀಸು ಗಾಳಿಯಲ್ಲಿ ಅವೆಲ್ಲವೂ ಹೇಳ ಹೆಸರಿಲ್ಲ ದಂತೆ. ಕೊಚ್ಚಿ ಹೋಗಿಬಿಟ್ಟವು. ಆಳು ಹುಡುಗ ರಾಜು ಬಂದು ನಿಂತ.

ಎಲ್ಲವೂ ಸಿದ್ಧವಾಗಿದೆ ಎನ್ನುವಂತಿತ್ತು ಅವನ ನಿಲವು. ಸಧ್ಯ ಬೇಕಾಗಿದ್ದು ಅಷ್ಟೆ. ಆಗಲೇ ಮೂವತ್ತು ಬಾರಿ ಸಾಬಿ ಡೈನಿಂಗ್ ಹಾಲಿನತ್ತ ಕಣ್ಣು ಹಾಯಿಸಿದ್ದ.

ಕೈಯಲ್ಲಿದ್ದ ವ್ಯಾನಿಟಿ ಬ್ಯಾಗು ತೆರೆದು ಅದರಲ್ಲಿದ್ದ ಕರ್ಚಿಫು ತೆಗೆದು ಕೊಂಡು ಒಳಬಂದಳು. ಬಹಳ ಹತ್ತಿರದಲ್ಲಿದ್ದಾಳೆ. ಬಹಳ ಹತ್ತಿರ. ಹೇಗೆ ಹೇಗೋ ಆಗುತ್ತಿದೆ. ಹೀಗೆ ಎಂದು ಬಿಡಿಸಿ ಹೇಳಲು ಬರುವಂತಿಲ್ಲ.

ಪಕ್ಕದಲ್ಲಿಯೇ ಕುಳಿತಿದ್ದಾಳೆ. ಎದುರು ಸಾಬಿ. ಬಡ್ಡಿ ಮಗನಿಗೆ ಯಾವ ಯೋಚನೆಯೂ ಇಲ್ಲ. ಮುಂದಿದ್ದುದನ್ನೆಲ್ಲ ಖಾಲಿಮಾಡಿ ರಾಜು ವಿನ ಮುಖ ನೋಡುತ್ತಿದ್ದಾನೆ. ಹೊಟ್ಟೆ ಬಾಕ.

"ರಾಜು, ಸ್ವೈಯದ್‌ಗೆ ಏನು ಬೇಕೋ ಕೇಳು."

"ನಿಮಗೇನು ಬೇಕು ?"

"ಏನು ಬೇಡ. ಇದೇ ಜಾಸ್ತಿ."

ಅವಳು ತಿನ್ನುವಾಗಿನ ನಾಜೋಕು ನೋಡಿದಾಗ ; ಸಾಬಿ ತಿನ್ನುವು ದನ್ನು ಗಮನಿಸಿ ಕೈತಟ್ಟಿ ಗಟ್ಟಿಯಾಗಿ ನಗಬೇಕು ಎನಿಸುತ್ತದೆ. ಅದನ್ನು ನೋಡಿದರೆ ಅಸಹ್ಯವಾಗಿ, ತಿನ್ನಲೂ ಕೂಡ ಬೇಸರವಾಗಿಬಿಡುತ್ತದೆ.

"ಮಿಸ್ ಮೇರಿ ಅವರಿಗೆ ಡ್ರಿಂಕ್ಸ್ ತೆಗೆದುಕೊಳ್ಳುವ ಅಭ್ಯಾಸವಿದೆ."

"ಹೌದೇನು ?"

"ಹೀಗೆ ಸ್ನೇಹ ಕೂಟದಲ್ಲಿ ಮಾತ್ರ ತೆಗೆದು ಕೊಳ್ಳುತ್ತೇನೆ."

"ಪರವಾಗಿಲ್ಲ. ಬೀರ್ ಆಗಬಹುದೇ ಇಲ್ಲ ರಂ ತರಿಸಲೇ."

"ಬೀರ್ ಆಗಬಹುದು."

ಒಂದು ಗ್ಲಾಸು, ಬಲವಂತಕ್ಕೆ ಮತ್ತೆ ಅರ್ಧ ಗ್ಲಾಸು ಬಗ್ಗಿಸಿಕೊಂಡಳು ಡಿಸೋಜ ಮೂರು ಗ್ಲಾಸು ಬಗ್ಗಿಸಿಕೊಂಡಿದ್ದ.

ಮೂವರು ಡೈನಿಂಗ್ ಟೇಬಲ್ಲಿನಿಂದ ಎದ್ದರು. ಮನದಲ್ಲಿ ಬೊಬ್ಬೆ ಹಾಕುತ್ತಿದ್ದ ಬಯಕೆಯನ್ನು ಇವಳಿಗೆ ಬಾಯಿಬಿಟ್ಟು ಹೇಳುವುದೆ ? ಅವಳ ಮುಖ ನೋಡಿದಾಗ ಹೇಗೆ ಹೇಳುವುದು ಎನ್ನಿಸಿ ಬಿಡುತ್ತದೆ.

"ಸಿಗರೇಟು ?"

"ಅಭ್ಯಾಸವಿಲ್ಲ. ಬೇಡ."

ಸೈಯದ್ ಆಗಲೇ ಸಿಗರೇಟು ಹಚ್ಚಿ ಒಂದು ಧಂ ಎಳೆದಿದ್ದ. ಸಿಗರೇಟು ಹತ್ತಿಸಿದ ಡಿಸೋಜ ಒಮ್ಮೆ ಎಳೆದು ಪುನಃ ಹೊಗೆ ಬಿಟ್ಟ. ಆ ಹೊಗೆಯ ವರ್ತುಲದಲ್ಲಿ ಮೇರಿ ತಿರುಗುತ್ತಿರುವಂತೆ ಕಂಡಿತು.

"ಉಪಾಹಾರ ಬಹು ಸೊಗಸಾಗಿತ್ತು. ನಿಮ್ಮ ಸೌಜನ್ಯಕ್ಕೆ ವಂದನೆಗಳು. ನಾನಿನ್ನು ಹೋಗಲು ಅಪ್ಪಣೆ ಕೊಡಿ."—ಮೇರಿ ಮೇಡಿದ್ದು ನಿಂತಳು.

ಇಷ್ಟೇ ಏನು ? ಇಷ್ಟಕ್ಕಾಗಿಯೇ ಏನು ಇವಳನ್ನು ಇಷ್ಟು ದಿನ ಕುರಿತು ತಪಸ್ಸು ಮಾಡಿದ್ದು ?

"ನಾಳೆ ಸಂಜೆ ನೀವು ದಯವಿಟ್ಟು ಟೀಗೆ ನಮ್ಮಲ್ಲಿ ಬರಬೇಕು."—ಮೇರಿಯ ಔತಣದ ಕರೆ.

ಆಗಲಿ ಎನ್ನುವಂತೆ ಗೋಣಾಡಿಸಿದ ಡಿಸೋಜ ವಂದಿಸಿದ. ಅವಳು ಹೊರ ನಡೆದಳು.

ಅವಳ ಹೈ ಹೀಲ್ಡ್ ಶೂಸಿನ ಸದ್ದು ; ಹೃದಯದ ಮೇಲೆ ಮೊಳೆ ಇಟ್ಟು ಹೊಡೆದಂತೆ.

"ಸಾಬಿ, ಅವರನ್ನು ಮನೆಯವರೆಗೂ ತಲುಪಿಸಿ ಬಾ"

ಇಬ್ಬರೂ ಹೊರ ಹೋದ ಮೇಲೆ ಬಾಗಿಲು ಬಡಿದು ಬೀರ್ ಖಾಲಿ ಮಾಡಿ ಸಿಗರೇಟು ಅಂಟಿಸುವುದು. ಹೊಗೆ. ವೃತ್ತಾಕಾರವಾಗಿ ಉರುಳುವ ಹೊಗೆ. ಎಣೆ ಕಾಣದ ಹೊಗೆ.

ನಾಳೆ ಸಂಜೆಯವರೆಗೂ ಕಾಯಬೇಕು. ಇಷ್ಟು ದಿನದ ತಪಸ್ಸಿಗೆ ನಾಳೆ ಸಿದ್ಧಿ ಪಡೆಯಲೇಬೇಕು. ಇನ್ನು ಮುಂದೆ.......ಇನ್ನು ಮುಂದೆ ತಡೆಯಲಾಗದು. ಬಯಕೆ ನರ ನರವನ್ನೆ, ಹೊಸೆದು ವೇದನೆ ಗೊಳಿಸುತ್ತಿದೆ.

ಸಂಜೆಯ ವೇಳೆಗೆ ಬರುತ್ತೇನೆ ಎಂದ ಸಾಬಿ ಏಕೆ ಇನ್ನು ಬಂದಿಲ್ಲ ? ಬಾರದಿದ್ದೆ ಒಳ್ಳೆಯದೇ ಆಯಿತು. ಪ್ರಾಯಶಃ ನನ್ನ ಸ್ಥಿತಿ ಅರಿತು, ಬಂದರೆ ಅಡ್ಡಿಯಾದೀತೇನೋ ಎಂದು ತಿಳಿದು ಬಾರದೆ ಉಳಿದಿರಬಹುದು.

ಸಾಧ್ಯವಾದಷ್ಟು ಸಿಂಪಲ್ ಆಗಿ ಹೋಗಬೇಕು. ಉಲ್ಲನ್ ಪ್ಯಾಂಟ್ ಟರ್ಲಿನ್ ಶರಟ್, ಕಾಲಿಗೆ ಹವಾಯ್ ಇಷ್ಟೇ ಸಾಕು.

ಶರ್ಟಿಗೆ ಸೆಂಟನ್ನು ಸಿಂಪಡಿಸಿಕೊಂಡು ಹತ್ತರ ಹಲವು ನೋಟುಗಳನ್ನು ಜೇಬಿಗೆ ತುರುಕಿಕೊಂಡು ಹೊರ ನಡೆದ.

ಹೊರಗಡೆಯೇ ಮೇರಿ ಕಾಯುತ್ತಿದ್ದಳು. ಅವಳನ್ನು ಕಂಡ ಒಡನೆಯೇ ಹೃದಯ ಹಾರ ತೊಡಗಿತು. ಸಾವರಿಸಿಕೊಂಡು ಒಳ ನಡೆದ. ಮನದಾಳದ ವಿಕಾರಗಳ ಛಾಯೆ ಮುಖದ ಮೇಲೆ ವ್ಯೈಚಾಚಿ ಮಲಗಿದ್ದವು.

"ನಮಸ್ತೆ. ನೀವು ಬರುವುದಿಲ್ಲವೋ ಏನೊ ಎಂದು ಬಗೆದಿದೆ"

"ಛೇ. ಎಲ್ಲಿಯಾದರೂ ಉಂಟೆ? ಪ್ರೀತಿಯಿಂದ ಕರೆದ ಮೇಲೆ ಬಾರದೆ ಇರುತ್ತೆನೆಯೇ?"–ಪ್ರೀತಿ ಎಂದು ಉದ್ದೇಶ ಪೂರ್ವಕವಾಗಿಯೆ ಉಪಯೋಗಿಸಿದ್ದ. ಅದೇ ತೋಳಿಲ್ಲದ ಕೆಂಪು ಬ್ಲೌಸ್. ಅದೇ ಎದ್ದು ಕಾಣುವ........ಹಾಯ್. ತೊಟ್ಟಿರುವ ಒಳಗಿನ ಲಂಗ ಯಾವ ಬಣ್ಣದು ಎಂದು ಕಾಣುವ ಸೀರೆ. ಅವಳ ದೇಹಕ್ಕೆ ಯಾವ ರೀತಿಯ ಅಲಂಕಾರವಾದರೂ ಚೆನ್ನಾಗಿಯೇ ಒಪ್ಪುತ್ತದೆ.

ಇನ್ನು ಪರವಾಗಿಲ್ಲ. ಬಯಕೆಗೆ ಕಟರೆಯಾಗುವಂತೆ ಹಿಡಿದು ತೀಗಿಸಿ ಬಿಡಬಹುದು. ಪ್ಲೇಟಿನಲ್ಲಿ ಒಂದು ಕೇಕ್ ತಂದು ಮುಂದಿಟ್ಟಳು.

"ನಿಮ್ಮನ್ನು ಉಪಚರಿಸುವಷ್ಟು ಯೋಗ್ಯತೆಯಿಲ್ಲ." ಅವಳು ನಕ್ಕು ಹೇಳಿದಳು.

ಇದರ ಅಗತ್ಯವೇ ಇರಲಿಲ್ಲ?

ಒತ್ತಾಯಕ್ಕೆ ಕಟ್ಟುಬಿದ್ದು ಒಂದು ಚೂರು ಮುರಿದು ಬಾಯಲ್ಲಿಟ್ಟು ಕೊಂಡ.

"ನೀವು ಮಾಡಿದ್ದಷ್ಟೆ?"

"ಹೌದು."

"ನಿಮ್ಮಂತೆಯೇ ಬಹು ರುಚಿಯಾಗಿದೆ."

ಮೇರಿ ಕೇಳಿ ನಕ್ಕಳು. ಕೆಂಪು ಗುಲಾಬಿ ತೂಗಾಡಿದಂತಾಯಿತು.

ಹೃದಯ ಆನಂದದಿಂದ ಒಡೆದು ಸಹಸ್ರ ಹೋಳಾಗಿಬಿಟ್ಟಿತೋ ಏನೋ ಬಾಯಲ್ಲಿ ಹೇಳುವುದೇನು? ಹತ್ತಿರದಲ್ಲಿಯೆ ನಿಂತಿರುವ ಅವಳ ಸೊಂಟದತ್ತ ಕೈ ಹಾಕಿ ಎಳೆದು ಕೊಂಡು ಬಲವಾಗಿ ಅಪ್ಪಿಕೊಳ್ಳಬೇಕು. ಏನೋ

ಏನೋ ಮಾಡಬೇಕು. ಅವಳಿಗೂ ಬಯಕೆ ಅರ್ಥವಾಗಿರಬೇಕು. ಇಲ್ಲವಾದರೆ ಮನೆಗೇಕೆ ಕರೆಯಬೇಕು ?

ಹಾಗೆಯೇ ಮಾಡಬೇಕು. ಕೈ ನಿಡಬೇಕು. ಅವಳ ಸೊಂಟದ ಸುತ್ತಲೂ ಕೈ ಹಾಕಬೇಕು ಈ ಜಗತ್ತನ್ನು ಕ್ಷಣ ಕಾಲವಾದರೂ ಮರೆಯಬೇಕು. ಬಾಗಿಲು ದೂಡಿದಂತಾಯಿತು. ನಿಂತಿದ್ದ ಮೇರಿ ಅತ್ತ ತಿರುಗಿದಳು.

"ಬನ್ನಿ ನಿದ್ದೆ ಹರಿಯಿತೆ ? ನಿನ್ನೆ ಹೇಳಿದ ಬಂಧುಗಳುಬಂದಿದ್ದಾರೆ. ಅವರ ಪರಿಚಯ ಮಾಡಿಕೊಡುತ್ತೇನೆ.

ಕಣ್ಣಿಗೆ ಕನ್ನಡಕ. ಹರಿವ ಖಾಕಿ ಚಡ್ಡಿ. ಮುಖದ ತುಂಬಾ ಕಲೆಗಳು ಕೆದರಿದೆ. ಬಲಗಾಲಿಲ್ಲ, ಕೋಲನ್ನು ಲೊಟ ಲೊಟ ಎನ್ನಿಸುತ್ತಾ ಬಂದು ಆತ ಡಿಸೋಜನ ಪಕ್ಕದ ಸ್ಟೂಲಿನ ಮೇಲೆಯೇ ಕುಳಿತ. ಯಾವ ಸಂಕೋಚವೂ ಇಲ್ಲದೆ ಪ್ರಮಾಣ ಮಾಡಿ ಹೇಳಬಹುದು ; ಚಿತ್ರರಂಗದ ಮಾಜಿ ವಿಲನ್ !

ಥತ್ ; ಅಸಹ್ಯ. ಅವನನ್ನು ಕಂಡು ಜಿಗುಪ್ಸೆಯಾಗದೆ ಮತ್ತೇನಾಗಬೇಕು ?

"ಇವರು ಮಿ|| ಡಿಸೋಜ. ಬಹು ಸ್ನೇಹಪರರು."

"ಇವರು ನನ್ನ ಪತಿ ಜಾನ್."

"ಅಂ!"

"ಜಾನ್, ಹಿಂದೆ ಮಿಲಿಟರಿ ಟ್ರಕ್ ಡ್ರೈವರ್ ಆಗಿದ್ದರು. ಅಪಘಾತ ಒಂದರಲ್ಲಿ ಬಲಗಾಲು ಮುರಿದು ಹೋಯಿತು. ಬಲಗಣ್ಣು ಕುರುಡಾಯಿತು."

ಅವಳ ಧ್ವನಿ ಗದ್ಗದವಾಗಿತ್ತು. ಪ್ರಯತ್ನಪಟ್ಟು ದುಃಖ ಹತ್ತಿಕ್ಕಿಕೊಳ್ಳಲು ಪ್ರಯತ್ನಿಸಿದಳು.

ಭವ್ಯವಾದ ಕನ್ನಡಿಯೊಂದನ್ನು ನುಚ್ಚು ನೂರು ಮಾಡಿದಂತಹ ವೇದನೆ. ಬಯಕೆಯ ಆರ್ತನಾದ ಒಮ್ಮೆಯೇ ತಲೆಯೊಡೆದುಕೊಂಡು ಬೋರಲು ಬಿದ್ದಿತ್ತು."

"ಬಂದ ಬಂಧುಗಳ ಮುಂದೆ ಗೋಳಕತೆ ಹೇಳಬಾರದು ಮೇರಿ. ಅವರಿಗೇನಾದರೂ ತಿನ್ನಲಿಕ್ಕೆ ಕೊಡು. ಹಳಸಿದ ಕತೆ ಹೇಳಿ ಪ್ರಯೋಜನ ವೇನು ?"

ಹಾಯ್, ಹೀಗಾಗಬಾರದಾಗಿತ್ತು. ಜಾನ್‌ಗತಿಯಲ್ಲ ; ತನ್ನದು ; ತನ್ನ ಬಯಕೆಯದು. ಕೂರಲಾಗುವುದಿಲ್ಲ. ಅಸಹ್ಯ, ವಾಂತಿ ಬರುವಂತೆ ಆಗುತ್ತದೆ. ಎದ್ದು ಹೊರಗೆ ಓಡಿಹೋಗಬೇಕು.

"ನಾನಿನ್ನು ಬರುತ್ತೇನೆ." ಡಿಸೋಜ ಎದ್ದು ನಿಂತ.

"ಏನು ಅವಸರ ? ಹೋಗುವಿರಂತೆ. ಈಗತಾನೆ ಬಂದಿದ್ದೀರಿ."

"ಇಲ್ಲ, ಸ್ವಲ್ಪ ತುರ್ತು ಕೆಲಸವಿದೆ. ಹಾಗೇ ನೋಡಿ ಹೋಗೋಣ ಎಂದು ಬಂದೆ."

"ಆಗಾಗ್ಗೆ ಬರುತ್ತಿರಬೇಕು."

ಜಾನ್ ಕೈ ಜೋಡಿಸಿದ.

ಮೇರಿಯ ಮುಖ ಮ್ಲಾನವಾಗಿತ್ತು. ದುಃಖದ ಛಾಯೆ ದಟ್ಟವಾಗಿ ಅವಳ ಮುಖವನ್ನು ಕವಿದಿತ್ತು. ಮತ್ತೆ ಅವಳನ್ನು ನೋಡಲಾಗುವುದಿಲ್ಲ,

ಪ್ಯಾಂಟಿನ ಜೇಬಿಗೆ ಕೈಹಾಕಿದ ಡಿಸೋಜ ರೂಪಾಯಿಗಳನ್ನು ತೆಗೆದು ಜಾನ್ ಕೈಗಿಡುತ್ತಾ ಹೇಳಿದ.

"ಇದು ಸೈನಿಕರ ನಿಧಿಗೆ ಅಲ್ಪಕಾಣಿಕೆ." ಬರುತ್ತೇನೆ.

ಹಾರುತ್ತಿದ್ದ ಬಯಕೆಯ ಗಾಳಿಪಟ, ಬಿರುಗಾಳಿಯ ರಭಸಕ್ಕೆ ಸೂತ್ರ ಕಿತ್ತು ಚಕ್ರ ಚಕ್ರವಾಗಿ ಸುತ್ತಿಕೊಂಡು ನೆಲದತ್ತ ರಭಸದಿಂದ ಉರುಳಿತಿತ್ತು. ಮೇರಿಯ ಮನೆಯಿಂದ ನಾಲ್ಕು ಮಾರು ಹೆಜ್ಜೆ ಹಾಕಿದ ಡಿಸೋಜ ಮತ್ತೊಮ್ಮೆ ಅತ್ತ ತಿರುಗಿ ನೋಡಿದ. ಮೇರಿಯ ಮನೆಯ ಬಾಗಿಲು ಆಗಲೇ ಮುಚ್ಚಿತ್ತು.

# ಕಡೆಯತಾಸು

"ಹುಡುಗಿ ಬೆಳ್ಳಗಿದ್ದಾಳೆ. ಸುಂದರವಾಗಿದ್ದಾಳೆ. ಬಹಳ ಚೆನ್ನಾಗಿದ್ದಾಳೆ. ಅದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಉದ್ದವಾದ ರೇಷ್ಮೆಯಂತಹ ಕೇಶರಾಶಿ. ಮಿನುಗುವ ಕಪ್ಪು ಕಣ್ಣು, ದಾಳಿಂಬೆಯ ಕಾಳಿನಂತ ಹಲ್ಲು. ಮೋಹಕ ಮುಖ. ಕವಿಯಾಗಿದ್ದರೆ ಚೆನ್ನಿತ್ತು—ಅವಳನ್ನು ವರ್ಣಿಸಲು........"

# ೬

ತೋಟದ ಕಾಲುದಾರಿಯನ್ನು ಬಿಟ್ಟು ಎಡದ ಪಕ್ಕಕ್ಕೆ ಹೊರಳಿ ಸಾಗತೊಡಗಿದ. ಅಲ್ಲಿ ಬಿದ್ದ ಎಲೆ ಸಂಪೂರ್ಣವಾಗಿ ಒಣಗಿದ್ದರಿಂದ ಕಾಲಿನ ಸಪ್ಪಳ ಸ್ಪಷ್ಟವಾಗಿ ಕೇಳಿ ಬರುತ್ತಿತ್ತು. ಆ ಶಬ್ದಕ್ಕೆ ಅವನೇ ಬೆಚ್ಚಿ ಬೀಳುತ್ತಿದ್ದ. ಮುಂದೆ ಸಾಗಲಾರದೆ ನಿಂತಲ್ಲಿಯೇ ನಿಂತು ಸುತ್ತಲೂ ಕಣ್ಣನ್ನೊಮ್ಮೆ ಆಡಿಸಿದ. ಪಕ್ಕದಲ್ಲಿದ್ದ ಹಲಸಿನಮರದ ಬುಡಕ್ಕೆ ಸಾಗಿದ. ಕೈಯಲ್ಲಿದ್ದ ಹಗ್ಗವನ್ನು ಕುಣಿಕೆ ಮಾಡಿ ಮರದ ರಂಬೆಗೆ ಬೀಸಿ ಎಸೆದ. ಪ್ರಯತ್ನ ಒಂದಲ್ಲ ಎರಡು. ಎರಡು ಸಾರಿಯೂ ಉದ್ಧೇಶ ಫಲಕಾರಿಯಾಗಲಿಲ್ಲ.

ಮತ್ತೊಮ್ಮೆ ಬಿರುಸಿನಿಂದ ಎಸೆದ. ಎಸೆಯುವ ರಭಸದಲ್ಲಿ ಕಾಲಿಗೆ ಏನೋ ತೊಡರಿ ಕೆಳಗೆ ಬಿದ್ದ. ಶಬ್ಧ ಕೇಳಿದ ಕಾವಲು ನಾಯಿ ಬೊಗಳುತ್ತಾ ಓಡಿಬರತೊಡಗಿತು. ಅದರ ಹಿಂದೆಯೇ ಬೆಳಕು ಚಲಿಸ ತೊಡಗಿತು. ಬೆಳಕು ಕಂಡುಬಿದ್ದ ಆ ವ್ಯಕ್ತಿ ಎದ್ದು ಓಡತೊಡಗಿದ.

ವ್ಯಕ್ತಿಯೊಂದು ಓಡುತ್ತಿರುವುದನ್ನು ಕಂಡ ಬೆಳಕು ತಾನು ಜೋರಾಗಿ ಚಲಿಸತೊಡಗಿತು. ಅದಕ್ಕೂ ಇಮ್ಮಡಿಯಾಗಿ ನಾಯಿ ಬೊಗುಳುತ್ತಾ ಓಡತೊಡಗಿತು. ಹಿಂದೆ ರಭಸದಿಂದ ಬೀಳುತ್ತಿದ್ದ ಬೆಳಕನ್ನು ಕಂಡು ಅವನು ಏಳುವುದನ್ನು ಬೀಳುವುದನ್ನೂ ನೋಡದೆ ಧಾವಂತದಿಂದ ಓಡತೊಡಗಿದ.

ಮುಂದಿನ ವ್ಯಕ್ತಿ ತಪ್ಪಿಸಿಕೊಳ್ಳುವುದನ್ನೂ ಕಂಡು, ಹಿಂಬಾಲಿಸುತ್ತಿದ್ದ ಹಿಂದಿನ ವ್ಯಕ್ತಿ ಕೈಯಲ್ಲಿದ್ದ ದೊಣ್ಣೆಯನ್ನು ಬೀಸಿ ಎಸೆದ

ಅಯ್ಯೋ....ಅಮ್ಮಾ....ಗಾಳಿಯಲ್ಲಿ ತೂರಿಬಂದ ಆರ್ತನಾದ ಮರು ಗಳಿಗೆಯಲ್ಲೇ ಬಿದ್ದ ಸದ್ದು. ಹಿಂಬಾಲಿಸುತ್ತಿದ್ದವನು ಬಿದ್ದ ವ್ಯಕ್ತಿಯ ಮೇಲೆ ಬೆಳಕು ಚೆಲ್ಲಿದ ತಲೆಗೆ ಬಿದ್ದ ಪೆಟ್ಟಿನಿಂದಾಗಿ ರಕ್ತ ಕಾಣಿಸಿಕೊಂಡಿತ್ತು. ಮೂಗಿನ ಬಳಿಗೆ ಕೈಯಿಟ್ಟು ನೋಡಿದ. ಉಸಿರು ಸಣ್ಣಗೆ ಆಡತೊಡಗಿತು. ಕೂತಿದ್ದ ಅವನು ಎದ್ದು ರಭಸದಿಂದ ಪೋಲೀಸ್ ಠಾಣೆಯತ್ತ ಓಡಿದ.

o o o o o

"ಸ್ವಾಮಿ"

"ಏನು"

"ತೋಟದಲ್ಲಿ ಕಳ್ಳತನವಾಗಿದೆ"

"ಯಾವತ್ತು ?"

"ಈಗ"

'ಆಗಲಿ ಬಿಡು ! ಮುಂಜಾನೆ ಬಂದು ಕಂಪ್ಲೆಂಟ್ ಬರೆದುಕೊಡು

"ಆದರೆ........!"

"ಈ ರಾತ್ರಿ ಏನು ಮಾಡೋಕಾಗಲ್ಲಯ್ಯ ಮುಂಜಾನೆ ಬಾ"

"ಕಳ್ಳ ಸಿಕ್ಕಿ ಬಿದ್ದಿದ್ದಾನೆ ಸ್ವಾಮಿ"

"ಆಂ ! ಏನಂದೆ ?"–ಮಂಪರಿನ ಜೋಲಿ ಹೊಡೆಯುತ್ತಾ ಕುರ್ಚಿ ಯಲ್ಲಿ ಕುಳಿತು ಟೇಬಲಿನ ಮೇಲೆ ಕಾಲು ಚಾಚಿದ ಹೆಡ್‌ಕಾನಿಸ್ಟೇಬಲ್ ಕೇಳಿದ.

ಕಳ್ಳ ಸಿಕ್ಕಿಬಿದ್ದಿದ್ದಾನೆ. ಬುದ್ಧಿಯೋರಾ !"

"ಎಲ್ಲಿದ್ದಾನೆ ?"

"ತೋಟದಲ್ಲಿ !"

"ಅವನ್ನ ಯಾರು ಹಿಡ್ಕೊಂಡಿರೋದು ?'

"ಯಾರು ಇಲ್ಲ, ಪ್ರಜ್ಞೆ ತಪ್ಪಿ ಬಿದ್ದವನೆ"

"ಯಾಕೆ ?"

ನಡೆದ ಸಂಗತಿಯನ್ನೆಲ್ಲಾ ಮಣಿ ಪೋಣಿಸಿದಂತೆ ಹೇಳಿದ. ಅವನ ಮಾತನ್ನು ಕೇಳಿದ ಕಾನಿಸ್ಟೇಬಲ್ ತಲೆದೂಗಿದ. ಮೇಜಿನ ಮೇಲಿನಿಂದ ಕಾಲೆಳೆದುಕೊಂಡು ಕುರ್ಚಿಯಲ್ಲಿ ಸೆಟೆದು ಕುಳಿತು ಕೇಳಿದ.

"ಹಿಂದೆ ಎಷ್ಟು ಭಾರಿ ಕಳವು ಆಗಿತ್ತು ?'

'ಎರಡು ಸಾರಿ'

'ಯಾವಾಗ ?'

"ಹದಿನೈದು ದಿನದ ಹಿಂದೊಮ್ಮೆ, ಮತ್ತೆ ಮೊನ್ನೆಯೊಮ್ಮೆ !'

'ಹಾಗೋ'

ಮಂದವಾಗಿ ಉರಿಯುತ್ತಿದ್ದ ದೀಪವನ್ನು ದೊಡ್ಡದು ಮಾಡಿ, ಲೇಖನಿ ಹಿಡಿದು ಕೇಳಿದ "ಈಗ ವಿವರವಾಗಿ ಹೇಳು" ಬಂದ ವ್ಯಕ್ತಿ ವಿವರ ಕೊಟ್ಟ ಬೇರೆ ಬೇರೆ ಕಾಗದದಲ್ಲಿ ಕಳುವಿನ ವಿವರ ಬರೆದುಕೊಂಡ. ಕಾನಿಸ್ಟೇಬಲ್ ಹೇಳಿದ, ಹಿಂದಿನ ತಾರೀಖು ಹಾಕಿ ರುಜು ಮಾಡು. ಅವನು ಯಾಂತ್ರಿಕವಾಗಿ ಆತ ಹೇಳಿದಂತೆ ರುಜು ಮಾಡಿದ.

"ಈಗ ನಡಿ ಹೋಗೋಣ"

ಮಲಗಿದ್ದ ಮತ್ತೊಬ್ಬ ಪೇದೆಯನ್ನು ಎಬ್ಬಿಸಿಕೊಂಡು, ಬಂದಿದ್ದ ಅವನೊಂದಿಗೆ ಕಾನಿಸ್ಟೇಬಲ್ ನಡೆದ.

೦ ೦ ೦ ೦

"ಸಾರ್"

"ಥತ್ ಮಲಗುವುದಕ್ಕೂ ಬಿಡುವುದಿಲ್ಲ.?

ಮಗ್ಗಲು ಹೊರಳುತ್ತಾ ಕತ್ತಿನವರೆಗೂ ಹೊದಿಕೆ ಎಳೆದುಕೊಂಡು ಮತ್ತೆ ಕಣ್ಣು ಮುಚ್ಚಿ ಮಲಗಲು ಪ್ರಯತ್ನಿಸಿದೆ.

"ಸಾರ್....s....s....s...."ಧ್ವನಿಯೊಂದಿಗೆ ಬಾಗಿಲ ಬಡಿತ. ಎದ್ದು ಹೋಗಿ ಬಾಗಿಲು ಬಡಿದ ಪ್ರಾಣಿಯನ್ನು ಸಿಗಿದು ಊರ ಬಾಗಿಲಿಗೆ ತೋರಣ

ಕಟ್ಟಿ ಬರಬೇಕೆಂಬಷ್ಟು ಸಿಟ್ಟು ಉಕ್ಕಿ ಹರಿಯಿತು. ಬಾಯಿ ಬಡಿದು ಕೊಳ್ಳಲಿ ಆದರೆ ನಾನು ಮಾತ್ರ ಏಳಬಾರದು ಎಂದು ನಿರ್ಧರಿಸಿಕೊಂಡು ಕತ್ತಿನವರೆಗೂ ಸಿಕ್ಕಿಸಿಕೊಂಡಿದ್ದ ಹೊದ್ದಿಕೆಯಲ್ಲಿ ಮುಖವನ್ನು ಮರೆ ಮಾಡಿದೆ. ಥತ್, ಪ್ರಾರಬ್ಧ ಕರ್ಮ, ದಿನವೂ ಇದ್ದದ್ದೇ ಗೋಳು.

"ಡಾಕ್ಟರ್ ಸಾಹೇಬರೆ!" ಕೂಗಿನೊಂದಿಗೆ ಹಿಂಬಾಲಿಸಿತು ಬಾಗಿಲ ಬಡಿತ. ಉಸಿರು ಕಟ್ಟುವಾಂತಾದರೂ ಮುಸುಕು ತೆಗೆಯದೆ ಮಗ್ಗುಲಾದೆ.

"ಸಾರ್....ದಡ್....ದಡ್ ಕೂಗಿನೊಂದಿಗೆ ಬಾಗಿಲ ಬಡಿತದ ಸದ್ದು. ಕಿವಿಯಲ್ಲಿ ಕಾಸಿದ ತಮಟೆ ಬಾರಿಸಿದಂತಾಯಿತು. ಕರ್ಮ ಅನುಭವಿಸಿಯೇ ತೀರಬೇಕು. ಇಲ್ಲದೆ ಹೋದರೆ ಸವೆಯುವ ಬಗೆಯಾದರೂ ಹೇಗೆ? ಏನು ಮಾಡಿದರೂ ಪಿಶಾಚಿ ತೊಲಗುವುದಿಲ್ಲವೆಂದುಕೊಂಡು ಮುಸುಕು ತೆಗೆದು ಮಲಗಿದ್ದಲ್ಲಿಂದಲೇ ಸಿಡುಕಿ ಕೇಳಿದೆ; "ಯಾರು?"

"ನಾನು ಸಾರ್, ಪಿ. ಸಿ. ಮುನ್ನೂರ ಮುವತ್ತೊಂದು"

ಅಪ್ಪ ಇಟ್ಟ ಹೆಸರು ಅವನಿಗೆ ಮರೆತು ಹೋಗಿರಬೇಕು! ಗುತ್ತಿಗೆಯ ಶನೇಶ್ವರ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಎದ್ದು ಬಾಗಿಲು ತೆಗೆದೆ.

ನಿದ್ದೆಕೆಟ್ಟು ಚಳಿಯಲ್ಲಿ ನಿಂತಿದ್ದ. 'ಮುನ್ನೂರ ಮುವತ್ತೊಂದು' ನನ್ನನ್ನು ಕಂಡ ಒಡನೆಯೇ ಹೇಳಿದ.

"ಖಾವಂದ್, ಅರ್ಜೆಂಟಾಗಿ ಬರಹೇಳ್ತಾ ಐತೆ"

"ಖಾವಂದ! ಮುಖಕ್ಕಿಷ್ಟು ಬೆಂಕಿ ಹಾಕಲಿ! (ಬಾಯಲ್ಲಿ ಆಡುವುದುಂಟೆ? ಆಡಿ ಚಪಲ ತೀರಿಸಿಕೊಂಡೆ ಮನದಲ್ಲಿಯೇ! ಸಾಕಲ್ಲ?)

'ಯಾಕೆ?"

'ಜ್ಞಾನ ತಪ್ಪಿದೆ'

'ಖಾವಂದರಿಗಾ?' (ತಪ್ಪಿ ಆಡಿ ತುಟಿ ಕಚ್ಚಿಕೊಂಡೆ)

'ರಾಂ! ರಾಂ! ಕಳ್ಳನೊಬ್ಬನಿಗೆ'

'ಸರಿ ಮತ್ತೆ! ಬೆಳಿಗ್ಗೆ ನೋಡಿದರಾಯಿತು. ಕಳ್ಳ! ಅವನಿಗಾಗಿ

ನಿದ್ದೆ ಕೆಟ್ಟು ಮಧ್ಯ ರಾತ್ರಿಯಲ್ಲಿಯೇ ಎದ್ದು ಹೋಗುವಷ್ಟು ಬುದ್ಧಿ ಗೇಡಿಯೇ ?'

'ಅವನ ಮೇಲೆ ಹಿಂದಿನ ಎರಡು ಕೇಸಿದೆ. ಮಗ ಎಲ್ಲಾದ್ರು ಗೊಟಕ್ ಅಂದ್ರೆ ಖಾವಂದರಿಗೆ ಪ್ರಮೋಶನ್ ಯಾವಾಗ ? ನನಗೆ ಬಡ್ತಿ ಯಾವಾಗ ?'

'ಬಂದೆ ನಿಲ್ಲು' ಒಳಸಾಗಿ ಬುಜಕ್ಕೆ ಕೋಟು ಸಿಕ್ಕಿಕೊಂಡು, ಔಷಧಿಯ ಚರ್ಮದ ಚೀಲ ಹಿಡಿದು ಹೊರಟೆ.

೦ ೦ ೦ ೦

'ಅಯ್ಯೋ....ಅಮ್ಮ....!

ತಲೆಗೆ ಪೆಟ್ಟು ಬಿದಿದ್ದ ಅವನು ಹಾಸಿಗೆಯಲ್ಲಿ ನರಳತೊಡಗಿದ್ದ,

'ತಲೆಗೆ ಬಹಳ ಜೋರಾಗಿ ಏಟು ಬಿದ್ದಿದೆ ಸಾರ್ ? ನನ್ನನ್ನು ಕಂಡು ಸೆಡೆದು ನಿಂತು ಹೇಳಿದ ಹೆಡ್ ಕಾನಿಸ್ಟೇಬಲ್ (ಪಾಪಿ ಬದುಕಿದನಾದರೂ ಏಕೆ ? ಸಾಯಬಾರದಿತ್ತೆ ? ಬದುಕಿ ನಮ್ಮ ಪ್ರಾಣ ಹಿಂಡುತ್ತಾರಲ್ಲ !)

'ಅಷ್ಟು ಅವಸರವೇನಯ್ಯ ಆಗಿತ್ತು ? ಧ್ವನಿಯಲ್ಲಿ ಸಿಟ್ಟಿನ ಕಾವಿತ್ತು.

'ಕೇಸ್ ಸಿಕ್ಕಿ ಬಹಳ ದಿನ ಆಗಿತ್ತು ಸಾರ್. ಅದೂ ಮಿಕ ತಾನಾಗೆ ಬಲೆಗೆ ಬಿದ್ದಿದೆ. ಸ್ವಲ್ಪ ಬದುಕಿದರೆ ಆರು ತುಡುಗಿನ ಪ್ರಕರಣ ಬರೆದು ತಲೆಯ ಮೇಲೆ ಹೇರಬಹುದು !'

'ನಿಮ್ಮ ಕಾಟ ತಪ್ಪಿದ್ದಲ್ಲ ! ವಿಧಿಯಿಲ್ಲದೆ ಲೆದರ್ ಬ್ಯಾಗನ್ನು ಸ್ಟೂಲಿನ ಮೇಲಿಟ್ಟು ಅವನ ತಲೆಯ ಗಾಯವನ್ನು ಪರೀಕ್ಷಿಸ ತೊಡಗಿದೆ.

ತಲೆಗೆ ಏಟು ಜೋರಾಗಿಯೇ ಬಿದ್ದಿತ್ತು. ಎಡಕಿವಿಯ ಮೇಲ್ಭಾಗದಲ್ಲಿ ತೂತು ಬಿದ್ದಿತ್ತು. ನೆನಸಿದ ಹತ್ತಿಯಿಂದ ಶುದ್ಧಿಮಾಡಿ. ಔಷಧಿ ತುಂಬಿ ಬ್ಯಾಂಡೇಜ್ ಬಿಗಿದು ಅವನನ್ನು ಶಪಿಸುತ್ತಾ ಮನೆಗೆ ಸಾಗುವುದರಲ್ಲಿ ರಾತ್ರಿ ಮೂರಕ್ಕೂ ಮಿಕ್ಕಿ ಹೋಗಿತ್ತು.

ಬೆಳಿಗ್ಗೆ ಎದ್ದು ಯಾರ ಮೋರೆ ನೋಡಿದೆನೋ. ಅಂತೂ ಭಲೋ ನಿದ್ದೆ ಹಾಳಾಯಿತು. ಮಗ್ಗಲು ಬಟ್ಟೆಯನ್ನು ಸರಿಮಾಡಿ ಹಾಸಿಗೆಯ ಮೇಲೆ ಉರುಳಿ ಮುಸುಕು ಬೀರಿ ಮಲಗಿದೆ.

· ಕಣ್ಣಿನಿಂದ ನಿದ್ದೆ ಎಂದೋ ಓಡಿ ಹೋಗಿತ್ತು. ಕಣ್ಣು ಮುಚ್ಚಿ

ಮಲಗಿದೆ. ನಿದ್ದೆ ಬಂದಿತೋ ಏನೋ ಎಂದು. ಇಲ್ಲ ಬರಲೊಲ್ಲದು ನಾಲ್ಕಾರು ಬಾರಿ ಹೊರಳಿದೆ ವೈನೋವು ಪ್ರಾರಂಭವಾಯಿತು. ಉಸಿರು ಕಟ್ಟಿದಂತಾಗಿ ಮತ್ತೆ ಮುಸುಕು ಸರಿಸಿದೆ.

'ನೋಡಲೇನೋ ಆತ ಸೌಮ್ಯವಾಗಿದ್ದಾನೆ. ತುಡುಗು ಮಾಡುವ ಶಕ್ಯತೆ ಉಂಟೆ? ನಿದ್ದೆಯೊಡನೆ ಕಾಲುಕೆರೆದುಕೊಂಡಿತು ಅಧಿಕ ಪ್ರಸಂಗಿ ಮನ

'ಉದ್ದಕ್ಕೆ ಕೃಶಾಂಗವಾಗಿರುವ ಆತ ತುಡುಗು ಮಾಡಿದ್ದಕ್ಕಲ್ಲವೇ ಸಿಕ್ಕಿ ಬಿದ್ದದ್ದು? ಯಾವುದಕ್ಕೂ ಬಲ್ಲವರು. ಈ [ಪ್ಯಾದೆಗಳ ಚೇಷ್ಟೆ ಯಾರಿಗೆ ಅರ್ಥವಾದೀತು? ಹಗಲನ್ನು ರಾತ್ರಿ ಮಾಡ್ತಾರೆ. ರಾತ್ರೀನ ಹಗಲು ಮಾಡ್ತಾರೆ. ತುಡುಗರನ್ನು ನಂಬಬಹುದು ಆದರೆ ಪ್ಯಾದೆಗಳನ್ನು ನಂಬೋದುಂಟೆ? ಹಾಗದರೆ ಅವನು ತಡುಗು ಮಾಡಿಲ್ವೇನು?

ಯಾರಿಗ್ಗೊತ್ತು? ಮುಂಜಾನೆ ಕೇಳಿದರಾಗದೆ ಕಿರಿಕಿರಿ ಮಾಡುತ್ತಿದ್ದ ಕಣ್ಣನ್ನು ನೋಡಿದ ಮನಸ್ಸು ಮತ್ತೆ ತೂಕಡಿಸತೊಡಗಿತು.

ಎದ್ದು ಹಲ್ಲುಜ್ಜಿ ಮುಖತೊಳೆದು ಕಾಫಿ ಕುಡಿಯೋ ಹೊತ್ತಿಗೆ ಒಂಬತ್ತೂವರೆಗಂಟೆ. ಇನ್ನು ಅರ್ಧ ಗಂಟೇಲಿ ಸ್ನಾನಮಾಡಿ ತಿಂಡಿ ತಿಂದು ಹೋಗಬೇಕು. ಬೆಳಗಾದರೆ ಗಡಿಯಾರದ ಮುಳ್ಳಿನೊಂದಿಗೆ ಅರ್ಥವಿಲ್ಲದ ಸೆಣಸಾಟ ಸಾಗಿಯೇ ತೀರಬೇಕು.

ಬ್ಯಾಗ್ ಹಿಡಿದು ಟೈಯನ್ನು ಕೈಯಲ್ಲಿಯೇ ಹಿಡಿದುಕೊಂಡು ನಡೆದೆ. ಟೈಮ್ ಆಗಿ ಹೋಯಿತಲ್ಲ! ಟೈಯನ್ನು ಕತ್ತಿಗೆ ಆಫೀಸಿನಲ್ಲಿಯೇ ಬಿಗಿಯ ಬಹುದು.

"ಏನಪ್ಪ ಹೇಗಿದೆ?"

ಮಂಚದಲ್ಲಿ ಅಂಗಾತನಾಗಿ ಮಲಗಿಕೊಂಡು ಕಣ್ಣಿನಲ್ಲಿಯೇ ಚಾವಣಿಯ ತೊಲೆ ಎಣಿಸುತ್ತಿದ್ದ ಅವನನ್ನು ಕೇಳಿದೆ. ಪಿ. ಸಿ. ಗಳಿಂದ ಸೆಟೆದು ನಿಂತು ನಮಸ್ಕಾರ ಪಡೆಯುವ ನಾನು, ಮಾತನಾಡಿದರೂ ಕಿವುಡ ನಂತೆ ಅವನು ಸುಮ್ಮನೆ ಮಲಗಿಕೊಂಡೇ ಇರಬೇಕೆ? ಎಲಾ ಇವನಾ!

"ಏಯ್! ನಿಂಗೇ ಕೇಳಿದ್ದು. ಹೇಗಿದೆ ಅಂತ?"

ಇಷ್ಟಕ್ಕೆಲ್ಲಾ ಬಿಡುವುದುಂಟೆ? ಎಷ್ಟಾದರೂ ನನಗೆ ಸರ್ವೀಸಾಗಿಲ್ಲವೆ?

ಇಂತಹವರನ್ನು ಎಷ್ಟು ನೋಡಿರಬೇಡ? ಅವನ ಮಂಚದ ಪಕ್ಕದಲ್ಲಿಯ ಕುರ್ಚಿಯಲ್ಲಿ ಕುಕ್ಕರಿಸುತ್ತಾ ಕೇಳಿದೆ.

ಅವನು ನನ್ನ ಮಾತನ್ನು ಕೇಳಿಯೂ ಮೌನವಾಗಿರುವುದುಂಟೆ?

ಕತ್ತು ತಿರುಗಿಸದೆ, ಕಣ್ಣನ್ನು ಹೊರಳಿಸಿಯೇ ನನ್ನತ್ತನೋಡಿ ಮತ್ತೆ ಅಂತರ ಜಂತಿ ಎಣಿಸಬೇಕೆ?

"ಎಲಾ ತುಡುಗ! ಅಹಂಕಾರ ಹೇಗಿದೆ ನೋಡಿದಿರಾ?"

"ಏಯ್ ಕಳ್ಳ! ನಿಂಗೇ ಕೇಳೋದು? ಅವನ ಮುಖದತ್ತ ಬಗ್ಗಿ ಕೇಳಿದೆ.

"ಯಾರು ಕಳ್ಳ?"

ಅಂತರ ಜಂತಿ ಎಣಿಸುತ್ತಿದ್ದ ಮಹಾನುಭಾವ ಒಮ್ಮೆಯೇ ಕೇಳಿದ! ಕಡ ತಂದ ಧೈರ್ಯವೋ, ಕೊಂಡಿಟ್ಟುಕೊಂಡ ಧೈರ್ಯವೋ, ಜೈಲಿಗೆ ಬಂದರೂ ಇನ್ನು ಉಳಿದಿದೆಯಲ್ಲ.

"ನಿನ್ನನ್ನು ಸುಮ್ಮನೆ ಬಿಡುತ್ತೇನೆಯೇ?"

"ನಿಮ್ಮ ಕೆಲಸ ನೀವು ನೋಡಿ ಹೋಗಿ"

ಎಲಾ ತುಡುಗ ನನ್ನಂತಹವನಿಗೆ ಹೇಳಿ ಮಾಡಿಸಿದ ಉತ್ತರವೇ? ನಿನ್ನನ್ನು ನೋಡಿದರೆ ತುಡುಗನ ಹಾಗೆ ಕಾಣೋದಿಲ್ಲ. ಅದಕ್ಕೆ ಕೇಳಿದೆ.

"ಹೋ....! ಉದ್ಗಾರ ತೆಗೆದ,

ಅವನ ಮುಖ ನೋಡಿದರೆ ಅಯ್ಯೋ ಅನ್ನಿಸುತ್ತದೆ. ಏಕೆಂದು ಅರಿಯೆ. ತುಡುಗು ಮಾಡಿಲ್ಲವೋ ಇಲ್ಲ ನಟನೆಯೋ? ಹಾಗೆ ಕಾಣದಲ್ಲ? ಮುಖದಲ್ಲಿ ಯೋಚನೆಯ ಜಾತ್ರೆಸಾಗಿದೆ!

"ನೀನು ತುಡುಗುಮಾಡಿಲ್ಲ ಅಲ್ಲವೇ?"

ನನ್ನ ಮಾತು ಕೇಳಿ ಅವನು ಬಲವಂತವಾಗಿ ಕಣ್ಣುಮುಚ್ಚಿಕೊಂಡ. ಕಣ್ಣೀರಿನ ಎರಡು ಹನಿ ಹಾಸಿಗೆಯ ಮೇಲೆ ಜಾರಿ ಬಿದ್ದಿತ್ತು.

ನನಗೇನೋ ಅವನು ತುಡುಗುಮಾಡಿರಲಿಕ್ಕಿಲ್ಲ ವೆನಿಸತೊಡಗಿದೆ. ಆದರೆ ಅವನ ಮೇಲೆ ಆಗಲೇ ಎರಡು ಪ್ಲಸ್ ಮತ್ತೊಂದು ತುಡುಗು ಪ್ರಕರಣ ದಾಖಲೆಯಾಗಿ ಬಿಟ್ಟಿದೆ. ಸತ್ಯಸಂಗತಿ ಅರಿಯೋಣವೆಂದರೆ ಅವನು ಮಾತನಾಡಲೊಲ್ಲ. ನನಗೇಕೆ? ಧಾಳಾಗಿಹೋಗಲಿ ತಲೆಯಲ್ಲಿ ಇಣುಕಿದ

ಯೋಚನೆಯನ್ನು ಬದಿಗೆ ಸರಿಸಿ, ಕೈಯಲ್ಲಿ ಹಿಡಿದಿದ್ದ ಪತ್ರಿಕೆಯಲ್ಲಿ ಕಣ್ಣು ತೂರಿಸಿದೆ. ಮನಸ್ಸಿನೊಂದಿಗೆ ಕಣ್ಣು ಮುಷ್ಕರ ಹೂಡಬೇಕೆ ? ಪೇಪರಿನಲ್ಲೂ ಅವನದೇ ಚಿತ್ರ. ಅರ್ಥವಾಗದ ಸಂಗತಿ. ಎಂದೂ ಇಲ್ಲದ ಯೋಚನೆ ಇಂದೇಕೆ ?

ಒಂದು ಸಂಗತಿ. ನನ್ನ ಸರ್ವೀಸಿನ ಆಯುಷ್ಯದಲ್ಲಿಯೇ ನಾನು ಇಷ್ಟು ಗಮನ ಕೊಟ್ಟಿದ್ದಿಲ್ಲ. ರಾತ್ರಿ ಅವನ ಮುಖ ನೋಡಿದ ಮೇಲಿಂದ ಏನೋ ಒಂದು ತರಹವಾಗಿದೆ—ನನ್ನ ಮನಸ್ಸು. ಏನು ಸಂಗತಿಯೋ ಏನೋ ಅರಿಯೆ.

ನನಗರ್ಥವಾಗದ ಸಂಗತಿಯೇನು ?

ಅವನ ಮುಖ ನೋಡಿದರಂತೂ ಸಭ್ಯ ಗೃಹಸ್ಥನ ಹಾಗೆ ಕಾಣಿಸು ತ್ತಾನೆ. ಅಂತಹವನು ಕೇವಲ ಒಂದು ಹಲಸಿನ ಹಣ್ಣನ್ನು ಕದಿಯಲು ಪ್ರಯತ್ನಿಸಿದನೆಂದರೆ ಹೇಗಾದರೂ ನಂಬುವುದು ?

ಅವನು ಸುಧಾರಿಸ ತೊಡಗಿದ್ದಾನೆ. ಗಾಯ ಮಾಗತೊಡಗಿದೆ. ಅವನ ಮೇಲಿನ ತುಡುಗು ಪ್ರಕರಣದ ವಿಚಾರಣೆ ನಾಳೆಯಾಗಲಿದೆ. ಇನ್ನು ಈ ಆಸ್ಪತ್ರೆಯಲ್ಲಿ ಅವನಿರುವಂತಿಲ್ಲ. ಜೈಲುವಾಸ ಖಚಿತ.

"ನೀನು ಅಪಾರವಾದ ದುಃಖವನ್ನು ಹೃದಯದಲ್ಲಿ ಅವಸಿಟ್ಟುಕೊಂಡು ನರಳುತ್ತಿರುವೆಯಲ್ಲವೆ ? ಅವನ ಗಾಯದ ಮೇಲೆ ಮೃದುವಾಗಿ ಕೈಯಾಡಿ ಸುತ್ತಾ ಕೇಳಿದೆ.

ಬಿಸಲಿಗೆ ಮಂಜು ಕರಗಬೇಕಲ್ಲ ! ಸೂರ್ಯ ಆಕಾಶ ಹತ್ತಿದ್ದನ್ನು ಕಂಡು ಚಂದಿರ ಪೇರಿ ಕೀಳಲಿಲ್ಲವೆ ? ನನ್ನ ಮಾತು ಕೇಳಿ ಅವನ ಕಣ್ಣಿನಲ್ಲಿ ನೀರು ಬರತೊಡಗಿತು

"ಪಾಪ ! ಅಪಾರವಾದ ದುಃಖವನ್ನುಂಡಿದ್ದಾನೆ." ಅವನ ಮುಖ ನೋಡಿದ ಕಣ್ಣುಗುಟ್ಟಿನಲ್ಲಿ ಹೃದಯಕ್ಕೆ ಹೇಳಿತು.

"ನಿಜವಾಗಿಯೂ ನೀನು ತುಡಿಗಿಗೆ ಪ್ರಯತ್ನಿಸಿಲ್ಲ. ನೀನೊಬ್ಬ ಸಭ್ಯ

ನಂತೆ ಕಾಣುವೆ" ಗಾಯದ ಮೇಲಿದ್ದ ಕೈಯನ್ನು ತೆಗೆದು, ಜಾರಿದ್ದ ಹೊದಿಕೆಯನ್ನು ಸರಿಪಡಿಸುತ್ತಾ ಹೇಳಿದೆ.

"ಏನಾದರೇನು ? ಎಲ್ಲಾ ಮುಗಿಯಿತಲ್ಲ !" ತುಟಿ ಬಿಗಿಯುತ್ತಾ ಹೇಳಿದ.

"ನೋಡು, ನಿನ್ನನ್ನು ಆತ್ಮೀಯನಾಗಿ ಕೇಳುತ್ತಿದ್ದೇನೆ. ಇನ್ನು ನೀನು ಇಲ್ಲಿರುವುದು ಒಂದೇ ತಾಸು. ಆಮೇಲೆ ನೀನುಂಟು ನ್ಯಾಯಕಟ್ಟೆಯುಂಟು ಪೋಲಿಸ್ ಉಂಟು. ಏನಾದರೂ ಹೇಳುವುದಿದ್ದರೆ ಹೇಳಿಬಿಡು" ಗಡಿಯಾರ ದತ್ತ ನೋಡಿಕೊಳ್ಳುತ್ತಾ ಹೇಳಿದೆ.

"ಕಡೆಯ ತಾಸು !" ಅವನಿಗರಿವಿಲ್ಲದಂತೆಯೇ ನುಡಿದ.

"ಹೌದು ಕಡೆಯ ತಾಸು. ನೀನಿಲ್ಲಿರುವುದು ಅಷ್ಟು ಹೊತ್ತು ಮಾತ್ರ !"

ಅದನ್ನು ಕೇಳಿ ಅವನು ನಿಟ್ಟುಸಿರುಬಿಟ್ಟ.

ನಿಮ್ಮನ್ನು ನೋಡಿದರೆ ಮೂರು ದಿನದಿಂದಲೂ ಏನೋ ಆತ್ಮೀಯ ಭಾವನೆ ಮೂಡಿಹೋಗಿದೆ ! ಏನೆಂದು ಅರ್ಥವಾಗುವುದಿಲ್ಲ ತಡೆದು ತಡೆದು ಹೇಳಿದ.

"ನನಗೂ ಅಷ್ಟೇ !" ನಾನೂ ಸೇರಿಸಿದೆ. ಅರ್ಥವಾಗದ ಸಂಕೋಲೆಯ ಬಂಧನ ! ಮಾಯೆಯ ಮಂಪರ ?

"ನನ್ನ ಹೃದಯದಲ್ಲಿ ಹೇರಿಕೊಂಡಿರುವ ದುಃಖದ ಭಾರ ಅತಿಯಾಗಿ ಹೋಗಿದೆ. ಹೊರಲಾರದಷ್ಟಾಗಿ ಹೋಗಿದೆ. ನಿಮಗೆ ಹೇಳಿ ಏನೂ ಉಪಯೋಗವಿಲ್ಲ. ನನಗೆ ಹೇಳಿದ ತ್ರಾಸ, ನಿಮಗೆ ಕೇಳಿದ ತ್ರಾಸ. ಆದರೂ ನಿಮಗೆ ಹೇಳುತ್ತೇನೆ. ಕೇಳಿ, ನನ್ನ ಮಾರ್ಗಕ್ಕೆ ಮಾತ್ರ ಅಡ್ಡ ಬರಬಾರದು.

ಇದೇನು ? ಹೊಸಪಟ್ಟು ! ಏನು ಹೇಳಬೇಕೆಂದು ತೋಚದೆ ಸುಮ್ಮನೆ ಕುಳಿತೆ.

"ಏಕೆ ನನ್ನ ಕತೆ ಕೇಳುವುದಿಲ್ಲವೇನು ? ನನ್ನ ಮೌನ ಕಂಡು ಅವನೇ ಕೇಳಿದ.

"ಆದರೆ ಕಟ್ಟುಪಾಡು ಬೇರೆ ಇದೆಯಲ್ಲ ?"

"ಇದ್ದರೇನಂತೆ ? ಕೇಳಿದಂತಾಗದೆ"

"ಆಗಬಹುದು"

ಮಲಗಿದ್ದ ಅವನು ಕೈಯೂರಿ ಎದ್ದು ಮಂಚಕ್ಕೊರಗಿ ಕುಳಿತು ಕೇಳಿದ್ದ.

"ಇಲ್ಲಿ ನಾನಿನ್ನು ಎಷ್ಟು ಹೊತ್ತು ಇರುತ್ತೇನೆ ?"

"ಸುಮಾರು ಇನ್ನೊಂದು ತಾಸು" ಗಡಿಯಾರದತ್ತ ನೋಡಲು ಬೇಸರವಾಗಿ, ಸುಮಾರು ಎಂದು ಉಪಯೋಗಿಸಿದ್ದೆ.

"ಅಷ್ಟರಲ್ಲಿಯೇ ಹೇಳಿ ಮುಗಿಸಬೇಕು"

"ಹೌದು"

"ನಾನು ಹೇಳುವಾಗ ಮಧ್ಯೆ ಏನು, ಎತ್ತ ಎಂದು ಮಾತ್ರ ವಿಚಾರಿಸ ಬಾರದು. ಆಗುತ್ತದೆಯೇನು ?

"ಆಯಿತು.

"ಜೋರಾಗಿ ಒಮ್ಮೆ ಕೇಕರಿಸಿ ಉಗುಳು ನುಂಗಿ ಹೇಳತೊಡಗಿದ.

ನನ್ನನ್ನು ಸಾಕಿದ್ದು ನನ್ನ ಸೋದರ ಕಕ್ಕ. ತಾಯಿಯ ಭಾವಚಿತ್ರ ವನ್ನು ನೋಡಿದ್ದೇನೆ. ತಂದೆ ಹೇಗಿದ್ದಿರಬಹುದೆಂಬ ಕಲ್ಪನೆಯು ನನಗಿಲ್ಲ. ಕಕ್ಕನ ಕಣ್ಣಿನ ಬಣ್ಣ ನೋಡಿಯೇ ಗಂಟಲಿನಲ್ಲಿ ಉಳಿಯುತ್ತಿದ್ದವು ಕೇಳುವ ಮಾತುಗಳು.

ಕಕ್ಕನಿಗೆ ದಿನಸಿ ಅಂಗಡಿ ಒಂದಿದೆ. ಬುದ್ಧಿ ತಿಳಿದ ಮೇಲೆ ನಾನು ಬಹು ವೇಳೆಯನ್ನು ಅಲ್ಲಿಯೆ ಕಳೆಯ ಬೇಕಾಗಿತ್ತು. ಮುಂಜಾನೆ ಎದ್ದು ಅಂಗಡಿಯ ಕಸ ಹೊಡೆದು ಬಾಗಿಲು ತೆಗೆದರೆ ಪುನಃ ನನಗೆ ಬಿಡುವು ಸಿಕ್ಕು ತ್ತಿದ್ದುದು ರಾತ್ರಿ ಎಂಟರ ಮೇಲೆಯೇ. ಮಧ್ಯೆ ಮಧ್ಯೆ ಸಿಡುಕಿನ ಸಂಬಳ. ಆಗೊಮ್ಮೆ ಈಗೊಮ್ಮೆ ಬೆನ್ನಿನ ಮೇಲೆ ಬೋನಸ್ !

ಓರಗೆಯವರೆಲ್ಲ ಬೆಳಗಾದರೆ ಶಾಲೆಗೋಡುತ್ತಿದ್ದರು ಅವರಂತೆ ನಾನು ಏಕೆ ಹೋಗಬಾರದು ? ಹೋಗುವ ಭಾಗ್ಯ ಉಂಟೆ! ಕಿಟಕಿಯಲ್ಲಿ ನಿಂತೇ ಅವರೆಲ್ಲಾ ನಲಿಯುವುದನ್ನು ನೋಡಿ ಸುಮ್ಮನಾಗಿದ್ದೇನೆ. ನಡೆದ ದ್ದೆಲ್ಲಾ ಹೇಳುವಂತಹದೇ ? ಯಾವುದು ಹೇಳಲಿ ! ಯಾವುದು ಬಿಡಲಿ.

ಬಾಲ್ಯಾವಸ್ಥೆಯಲ್ಲಾ ಈ ರೀತಿಯೇ ಕಳೆದುಹೋಯಿತು. ನನ್ನ

ಇಪ್ಪತ್ತನೆಯ ವರ್ಷ. ಅಂದರೆ ಎರಡುವರ್ಷಗಳ ಹಿಂದೆ ನನ್ನ ಕಕ್ಕ ಮದುವೆ ಗೊತ್ತು ಮಾಡಿದರು. "ಹೊಡೆದೆಯೆಲ್ಲೋ ಛಾನ್ಸ್ ! ಓರಗೆಯವರೆಲ್ಲಾ ನನ್ನ ಸುತ್ತುವರಿದು ಬೆನ್ನು ತಟ್ಟಿ ಹೇಳಿದರು.

"ಯಾಕೆ ? ನಾನು ಕೇಳಿದೆ.

"ನಿನ್ನ ಕಕ್ಕ ರತಿಯಂತಹ ಹೆಣ್ಣನ್ನು ನಿನಗೆ ಗೊತ್ತು ಮಾಡಿದ್ದಾನಲ್ಲ"

"ಹೌದೇನು ! ರತಿಯನ್ನು ನೋಡಿದ್ದರಲ್ಲವೆ ನನಗೆ ಅವರು ಹೇಳಿದ್ದು ಗೊತ್ತಾಗುವುದು.?

ಮದುವೆಯಾಗುವ ಮುನ್ನ ಹುಡುಗಿಯನ್ನು ನೋಡುವ ಸೌಭಾಗ್ಯ ವನ್ನು ಕೇಳಿಕೊಂಡು ಬಂದಿದ್ದನೇ ? ಮದುವೆ ಆ ಹುಡುಗಿಯೊಂದಿಗೆ ಆಗಿ ಹೋಯಿತು.

ಹುಡುಗಿ ಬೆಳ್ಳಗಿದ್ದಾಳೆ. ಸುಂದರವಾಗಿದ್ದಾಳೆ. ಬಹಳ ಚೆನ್ನಾಗಿ ದ್ದಾಳೆ. ಅದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಉದ್ದವಾದ ರೇಷ್ಮೆಯಂತ ಕೇಶರಾಶಿ, ಮಿನುಗುವ ಕಪ್ಪುಕಣ್ಣು ; ದಾಳಿಂಬೆಯ ಕಾಳಿನಂತಹ ಹಲ್ಲು, ಮೋಹಕ ಮುಖ. ಕವಿಯಾಗಿದ್ದರೆ ಚೆನ್ನಿತ್ತು ಅವಳನ್ನು ವರ್ಣಿಸಲು ನನಗೆ ಇವಳು ತಕ್ಕವಳೇ ? ಅವಳನ್ನು ನೋಡಿ ಮನ ಯೋಚಿಸತೊಡಗಿತು.

ನೀನು ನನ್ನಲ್ಲಿ ಏನಿದೆಯೆಂದು ನೆನಸಿ ಮದುವೆಯಾದೆ ?–ಮನ ನಿಲ್ಲಲಾರದೆ ಅವಳನ್ನು ಕೇಳಿತು.

ನನಗೆ ಗೊತ್ತಿಲ್ಲ. ನಿಮ್ಮ ಕಕ್ಕನನ್ನೇ ಕೇಳಿರಲ್ಲ ? ಸಿಡಾರೆಂದು ಒಳ ಹೋದಳು. ಹಾಲಿನಂತಹ ಮುಖ. ಮೂಗಿನ ತುದಿಯಲ್ಲಿಯೇ ಸಿಟ್ಟು ದೈವಲೀಲೆ ಎನ್ನಲೇ ? ಇದೇ ನೋಡಿ ಮಾಯೆ ಎನ್ನುವುದು.

ಮಾಮೂಲು ಯಥಾಪ್ರಕಾರ ಮತ್ತೆ ಅದೇ ಹಳೆಜಾಡು ಮದುವೆ ಯಾದ ಮೇಲೆ ಹೊಸದೇನು ಆಗಲಿಲ್ಲ. ಬೆಳಿಗ್ಗೆ ಎದ್ದು ಅಂಗಡಿಗೆ ಹೊರಟರೆ ಮತ್ತೆ ಮನೆ ಸೇರುವುದು ರಾತ್ರಿಯೆ. ಆಯಾಸ, ಹೊಟ್ಟೆಗೆ ಸ್ವಲ್ಪ ತುಂಬಿಸಿ ಮಲಗಿದರೆ ಮತ್ತೆ ಏಳುವುದು ಮುಂಜಾನೆಯೇ.

ಯಥಾ ವಿಧಿ. ಮಾಮೂಲು. ಯಾಂತ್ರಿಕ.

ಒಮ್ಮೆ ವ್ಯಾಪಾರಕ್ಕೆ ಬಂದಿದ್ದ ಮೀಸೆ ಮಲ್ಲ. ಉದ್ಧರಿ ಗಿರಾಕಿ ಹೇಳಿದ, "ನಿನ್ನನ್ನು ನೋಡಿದರೆ ನನಗೆ ಅಯ್ಯೋ ಅನ್ನಿಸುತ್ತದೆಯಲ್ಲಾ ?

"ಎಂದು ಇಲ್ಲದ್ದು ಇಂದೇಕೋ?" ಕಿವಿಯಲ್ಲಿ ತನ್ನ ಬಾಯಿಟ್ಟು ಹೇಳಿದ.

"ಮುಠಾಳ ಏನೆಂದೆ? ಕೆನ್ನೆಗೊಂದು ಬಿಗಿದೆ. ತಲೆಯಲ್ಲಿ ಎರಡನೆಯ ಮಹಾ ಸಂಗ್ರಾಮದ ಪುನರಾವರ್ತನೆ ಮತ್ತೆ ಪ್ರಾರಂಭವಾಯಿತು. ಕೆನ್ನೆ ಸವರಿ ಕೊಳ್ಳುತ್ತಲೇ ಅವನು ಹೇಳಿದ.

"ಬೇಕಾದರೆ ನನ್ನೊಡನೆ ಬಾ. ತೋರಿಸುತ್ತೇನೆ"

ಪರೀಕ್ಷಿಸಿಯೇ ತೀರಬೇಕೆಂದುಕೊಂಡು ಅಂಗಡಿಯ ಬಾಗಿಲಿಗೆ ಬಯ ಬೀಗ ಜಡಿದು ಅವನೊಡನೆ ನಡೆದೆ.

ಮುಂಬಾಗಿಲು ತಳ್ಳಿಕೊಂಡು ಕಳ್ಳ ಹೆಜ್ಜೆಯಿಡುತ್ತಾ ಸಾಗಿ, ಕಕ್ಕನ ಕೋಣೆಯ ಬಾಗಿಲ ಬಳಿ ನಿಂತು ಆಲಿಸಿದೆ. ಬಾಗಿಲು ಹಾಕಿತ್ತು.

ಹೌದು ಬಳೆಯ ಶಬ್ದ ? ಹೊಲಸು ನಗು. ಮೇಲುಸುರಿನ ಧ್ವನಿ ?

ಥೂ ! ಕುದಿಯುತ್ತಿರುವ ಎಣ್ಣೆಯಲ್ಲಿ ಅದ್ದಿ ತೆಗೆದಿದ್ದರೂ ಅಷ್ಟು ಭಾದೆಯಾಗುತ್ತಿರಲಿಲ್ಲವೋ ಏನೋ, ತಲೆ ತಿರುಗಿದಂತಾಯಿತು. ನಿಲ್ಲಲಾರದೆ ಹೊರಗೋಡಿದೆ.

ಉಪ್ಪುಂಡ ಮನೆಗೆ ಎರಡು ಬಗೆದರೆ ದೇವರು ಮೆಚ್ಚಬಹುದೆ? ಮನದಲ್ಲಿ ವಿವೇಚನೆಯ ಸುಂಡ ತಲೆ ಇಣುಕಿತು. ಎಲ್ಲಾ ಹಾಳಾಗಲಿ ! ಮಣ್ಣಿನಲ್ಲಿ ಮಣ್ಣಾಗಿಬಿಡಲಿ. ಹುಟ್ಟಿದ ತಪ್ಪಿಗೆ ಬಾಳಬೇಕು ಹಿಂದಿನಂತೆಯೇ ನಾಯಿ ಬಾಳುಸಾಗಿದರೆ ತೀರಿತು. ವಿವೇಕದ ಉದಯವೋ ಇಲ್ಲವೇ ಅಪೌರುಷತ್ವದ ಅಟ್ಟಹಾಸವೋ ? ಏನೋ ಅರಿಯೆ ಉದ್ರೇಕದ ಮನವನ್ನು ಮೆಟ್ಟಿ ನಿಂತಿತು. ವಿವೇಕದ ದೈತ್ಯ.

ಯಥಾ ವಿಧಿ. ಮಾಮೂಲು. ಯಾಂತ್ರಿಕ.

ಮೊನ್ನೆ ನಾಲ್ಕು ದಿನಗಳ ಹಿಂದೆ ನನಗೊಬ್ಬ ಮಗ ಹುಟ್ಟಿದನೆಂದು ಮನೆಯಲ್ಲಿ ಸಡಗರವೋ ಸಡಗರ.

ಯುದ್ಧದಲ್ಲಿ ವಿಜಯಗಳಿಸಿಕೊಂಡು ಬಂದ ಯೋಧ ನಂತಿದ್ದ ನನ್ನ ಕಕ್ಕ.

'ಹೆಣ್ಣೋ–ಗಂಡೋ' ಬೀದಿಯ ಭಾವಿಯಲ್ಲಿ ನೀರು ಜಗ್ಗುತ್ತಿದ್ದ ಹೆಂಗಸರ ಗುಂಪೊಂದು ಕಿಲಕಿಲನೆ ನಗುತ್ತಾ ಕೇಳಿತು. ಇವರಿಗೇಕೆ ? ಮನಸ್ಸು ತುಂಬಾ ವ್ಯಾಘ್ರಗೊಂಡಿತ್ತು. ಹೊಡೆತದ ಮೇಲೆ ಹೊಡೆತ. ಬಗ್ಗಿದೆ ನೆಲಸವರೆಗೂ ! ಮುಂದೆ ಸಾಧ್ಯವೇ ? ಇಲ್ಲ. ಇನ್ನು ಬದುಕಿರಬಾರದು ಎಂದಿತು ಗೋಳಿಡುತ್ತಿದ್ದ ಮನ. ಸಾಯಲೂ ಕೂಡ ಕೇಳಿಕೊಂಡು ಬಂದಿರಬೇಕು ನೋಡಿ ಹಗ್ಗ ಹಿಡಿದು ತೋಟಕ್ಕೆ ಹೋದದ್ದು ನೇಣು ಹಾಕಿಕೊಳ್ಳಲು. ಆದರೆ...."

ದೀರ್ಘವಾಗಿ ನಿಟ್ಟುಸಿರು ಬಿಟ್ಟು ಅವನು ತನ್ನ ಕಥೆಯನ್ನು ಹೇಳಿ ನಿಲ್ಲಿಸಿದ್ದ. ನನಗರಿವಿಲ್ಲದಂತೆಯೇ ಕಣ್ಣಿನಲ್ಲಿ ನೀರು ತುಂಬಿಕೊಂದಿತ್ತು. ಹನಿ ಹನಿಯಾಗಿ ಜಾರತೊಡಗಿದ್ದವು.

'ನೀವೇಕೆ ದುಃಖಿಸಬೇಕು ? ನನ್ನ ಕರ್ಮಕ್ಕೆ' ಅವನ ಧ್ವನಿ ನಡುಗುತ್ತಿತ್ತು.

'ನಡಿಯಯ್ಯ, ಕೋರ್ಟಿಗೆ ಹೊತ್ತಾಯಿತು ! ಮುನ್ಸೂರ ಮುವತ್ತೊಂದು ಅವನ ಕೈಗೆ ಬೇಡಿ ತೊಡಿಸುತ್ತಾ ಹೇಳಿದ.

'ನಾನಿನ್ನು ಬರುತ್ತೇನೆ ಡಾಕ್ಟರ್' ಕೈ ಮುಗಿದು ಮುನ್ಸೂರ ಮುವತ್ತೊಂದನ್ನು ಹಿಂಬಾಲಿಸಿದ. ನಿದ್ದೆಯಲ್ಲಿ ನಡೆಯುವವನಂತೆ ಹೆಜ್ಜೆ ಹಾಕುತ್ತಾ ಹಿಂಬಾಲಿಸಿದೆ. ಹತ್ತಿರ ಇದ್ದಾನೆ. ಆದರೆ ಎಷ್ಟೋ ದೂರ ! ನಿಂತಿದ್ದ ವ್ಯಾನಿನ ಹತ್ತಿರ ಬಂದ ಅವನು ಮತ್ತೊಮ್ಮೆ ನನ್ನತ್ತ ದೃಷ್ಟಿ ಬೀರಿ ವ್ಯಾನಿನ ಒಳ ಸೇರಿದ.

ಕೂಗಬೇಕೆನಿಸಿತು. ಗಂಟಲನ್ನು ಯಾರೋ ಅದುಮಿ ಹಿಡಿದಂತಾಯಿತು. ವ್ಯಾನು ಬೀದಿಯಲ್ಲಿ ಧೂಳೆಬ್ಬಿಸುತ್ತಾ ಸಾಗಿತ್ತು. ಕಣ್ಣಿನಲ್ಲಿ ಅಡಗಿದ್ದ ನೀರಿನಿಂದ ಹೋಗುತ್ತಿದ್ದ ವ್ಯಾನಿನ ಛಾಯೆ ಮಸುಕು ಮಸುಕಾಗ ತೊಡಗಿತು. ನಿಲ್ಲಲಾರದೆ ನಿಂತಲ್ಲಿಯೇ ಕುಸಿದೆ.

# ಅನುಗ್ರಹ

"ತಂದೆಯ ಅನುಗ್ರಹಕ್ಕೆ ಪಾತ್ರನಾಗಿ ಹೊರನಡೆದಿದ್ದ ಆ ಮಗುವನ್ನು ಕಂಡು ಪ್ರಕೃತಿ ಮಾತೆಗೆ ತಡೆಯಲಾರದ ದುಃಖ ಉಮ್ಮಳಿಸಿ ಬಂದು, ತನ್ನ ಕಣ್ಣೀರನ್ನು ಮಳೆಯ ರೂಪದಲ್ಲಿ ತನ್ನ ಮಗನ ಮೇಲೆ ಧಾರಾಕಾರವಾಗಿ ಸುರಿಸಲು ಪ್ರಾರಂಭಿಸಿದಳು. ......."

೭

"ಏನು, ನೋಡಿಕೊಂಡು ಬಂದಿರಾ ಅಮಾತ್ಯರೇ ?"

"ಅಹುದು ಮಹಾಪ್ರಭು"

"ಏನು ಸಂಗತಿ ? ಆ ಗುಡಿ ಇರುವುದು ನಿಜವೋ ?"

"ಇದೆ ಪ್ರಭು. ಇಲ್ಲಿಂದ ದಕ್ಷಿಣಕ್ಕೆ, ಒಂದೂವರೆ ಮೈಲಿ ದೂರದಲ್ಲಿ ಒಂದು ಚಿಕ್ಕ ಬೆಟ್ಟವಿದೆ. ಅದರ ಮೇಲೆ ಒಂದು ಹಾಳುಮಂಟಪವಿದೆ. ಈ ಮಂಟಪದ ಬಾಗಿಲು ಕಲ್ಲಿನಿಂದ ಮಾಡಿದಂತಿದೆ. ಅದು ತೆಗೆದುಕೊಂಡದ್ದನ್ನು ಯಾರೂ ನೋಡಿಲ್ಲ. ಬಾಗಿಲ ಮೇಲೆ ಒಂದು ಶಾಸನವಿದೆ."

"ಶಾಸನವೂ ಇದೆಯೆನು ?"

"ಹೌದು ಪ್ರಭು. ಬಾಗಿಲ ಮೇಲೆ ಒಂದು ಶಾಸನವೂ ಇದೆ."

"ಅದರಲ್ಲೇನಿದೆ ಎಂದು ಅರಿಯಲಿಲ್ಲವೇನು ?"

"ನೋಡಿದೆ ಪ್ರಭು ಆ ಗುಡಿಯ ಒಳಗೆ ಒಂದು ವಿಗ್ರಹವಿದೆಯಂತೆ. ಆ ದೇವಿಯನ್ನು ಸಂಗೀತ ಸುಧೆಯಿಂದ ಯಾರು ಮೆಚ್ಚಿಸುತ್ತಾರೋ, ಆಗ ಮಾತ್ರ ಆ ಕಲ್ಲು ಬಾಗಿಲು ತನಗೆ ತಾನೆ ತೆರೆದುಕೊಳ್ಳುವುದಂತೆ."

"ಬಾಗಿಲನ್ನು ಹಾಗೇ ತೆಗೆಯಲು ಪ್ರಯತ್ನಿಸಿದರೇನು ?"

"ಪ್ರಯತ್ನವೇನೋ ನಡೆಯಿತು ಆದರೆ ಸಾರ್ಥಕವಾಗಲಿಲ್ಲ. ಮೊನ್ನೆ ಕಾವಲುಗಾರನ್ನೊಬ್ಬ ಬಾಗಿಲು ತೆಗೆಯಲು ಹೋದ, ಆಗಲಿಲ್ಲ. ಇದ್ದಕ್ಕಿದಂತೆಯೆ ಆ ರಾತ್ರಿ ಕಾವಲುಗಾರ ಸತ್ತುಹೋದ"

"ಸತ್ತುಹೊದನೇನು ? ಅನ್ಯಾಯವಾಯಿತು ಅಮಾತ್ಯರೇ ಅನ್ಯಾಯ ವಾಯಿತು" ಬಾಗಿಲು ತೆಗೆಯಲು ಮತ್ತೇನು ಮಾಡುವುದು ಮಂತ್ರಿವರ್ಯರೇ ?"

"ಕ್ಷಮಿಸಬೇಕು ಮಹಾಪ್ರಭೂ. ಅದು ಸತ್ಯದೇವತೆ. ಇಲ್ಲವಾದರೆ ಬಾಗಿಲು ತೆಗೆಯಲು ಪ್ರಯತ್ನಿಸಿದ ಸೇವಕ ಕೂಡಲೇ ಸಾಯುತ್ತಿದ್ದನೇ ? ಬಲವಂತದಿಂದ ಅದನ್ನು ತೆಗೆಯಲು ಸಾಧ್ಯವೇ ಇಲ್ಲ."

ಶಾಸನದಲ್ಲಿರುವುದರ ಪ್ರಕಾರ ಮಾಡುವುದೇ ಕ್ಷೇಮವೆಂದು ನನಗೆ ತೋರುತ್ತದೆ"

"ನಿಜ ಅಮಾತ್ಯರೇ, ನಿಮ್ಮ ಮಾತು ನಿಜ."

"ಮುಂದೇನು ಮಾಡುವುದು ಮಹಾಪ್ರಭೂ."

"ನೋಡಿ, ನಮ್ಮ ಆಸ್ಥಾನ ವಿದ್ವಾಂಸರಾದ ನರಸಿಂಹಶಾಸ್ತ್ರಿಗಳಿಗೂ ಈ ಸಂಗತಿ ತಿಳಿಸಿ. ಹಾಗೆ ಈ ರಾಜ್ಯದ ಯಾವ ಪ್ರಜೆಯಾದರೂ ಸರಿಯೇ, ತನ್ನ ಗಾನ ಸುಧೆಯಿಂದ ಆ ಗಾನ ದೇವಿಯನ್ನು ಒಲಿಸಿಕೊಂಡು ದೇವಾಲಯದ ಬಾಗಿಲು ತೆಗೆಯುವಂತೆ ಮಾಡಿದಂತಹವರಿಗೆ ಸಹಸ್ರ ವರಹಗಳೊಂದಿಗೆ ಒಂದು ಶಾಲು ಜೋಡಿಯನ್ನು ಬಹುಮಾನ ಕೊಡುವುದಾಗಿ ರಾಜ್ಯದಲ್ಲಿ ಡಂಗುರ ಸಾರಿಸಿಬಿಡಿ"

"ಅಪ್ಪಣೆ ಪ್ರಭು"

ನರಸಿಂಹಶಾಸ್ತ್ರಿಗಳ ಮನೆತನವೇ ಸಂಗೀತಕ್ಕೆ ಪ್ರಸಿದ್ಧವಾಗಿತ್ತು. ನರಸಿಂಹಶಾಸ್ತ್ರಿಗಳ ತಂದೆ ದೇವಡು ಶಾಸ್ತ್ರಿಗಳು ಹಾಡಲು ಕುಳಿತರೆ ಶಾರದೆಯು ಅವರ ನಾಲಿಗೆಯ ಮೇಲೆ ನಲಿಯುತ್ತಿದ್ದಳೋ ಏನೋ ! ಅಂತೂ ಕೇಳುವವರು ಮಂತ್ರ ಮುಗ್ಧರಾಗಿ ಕುಳಿತಿರುತ್ತಿದ್ದರು. ಅವರ ಸಂಗೀತ ಕೇಳುವುದಕ್ಕೂ ಹಿಂದಿನ ಜನ್ಮದ ಪುಣ್ಯ ಬೇಕು ಎನ್ನುವ ಮನೋಭಾವನೆ ಜನರಲ್ಲಿ ಬೆಳೆದಿತ್ತು.

ಅವರ ವಿದ್ಯೆಗೆ ಮೆಚ್ಚಿದ ಮಹಾರಾಜರು ಅವರಿಗೆ ಅನೇಕ ಗ್ರಾಮಗಳನ್ನು ಉಂಬಳಿಯಾಗಿ ಬಿಟ್ಟುಕೊಟ್ಟು ಅವರನ್ನು ಆಸ್ಥಾನದ ವಿದ್ವಾಂಸರನ್ನಾಗಿ ಮಾಡಿಕೊಂಡಿದ್ದರು. ದೇವಡು ಶಾಸ್ತ್ರಿಗಳು ತಾವು ಸತತವಾಗಿ ಆರಾಧಿಸಿ ವಶಪಡಿಸಿಕೊಂಡಿದ್ದ ತಮ್ಮ ವಿದ್ಯೆಯನ್ನು, ತಮ್ಮ ಪುತ್ರ ನರಸಿಂಹ ಶಾಸ್ತ್ರಿಗೆ ಧಾರೆಯೆರೆದು ತಮ್ಮ ಇಹಲೋಕದ ಜೀವನವನ್ನು ಸಾರ್ಥಕಪಡಿಸಿ

ಕೊಂಡಿದ್ದರು. ದೇವಡು ಶಾಸ್ತ್ರಿಗಳು ದಿವಂಗತರಾದಾಗ ಮಹಾರಾಜರ ವೇದನೆಗೆ ಪಾರವೇ ಇಲ್ಲ. ಇನ್ನು ಅವರ ಗಾನಕೇಳಲು ತವಕಿಸುತ್ತಿದ್ದ. ಜನ ಕೋಟಿಯ ದುಃಖಕ್ಕೆ ಎಲ್ಲೆಯುಂಟೆ? ಅವರು ಎಷ್ಟೇ ವಿದ್ವಾಂಸರಾದರೂ ನಿರ್ಗರ್ವಿಗಳಾಗಿ ಸರಳ ಜೀವನ ನಡೆಸುತ್ತಿದ್ದರು. ಬಹುಶಃ ಅದರಿಂದಲೋ ಏನೋ ಅವರು ಎಲ್ಲರ ಗೌರವಕ್ಕೂ ಪಾತ್ರರಾಗಿದ್ದಿರಬಹುದು.

ದೇವಡು ಶಾಸ್ತ್ರಿಗಳು ದಿವಂಗತರಾದ ಮೇಲೆ ನರಸಿಂಹಶಾಸ್ತ್ರಿಯವರು ಆಸ್ಥಾನದ ವಿದ್ವಾಂಸರಾಗಿ ನೇಮಕಗೊಂಡರು. ತಂದೆಯಂತೆ ತಾವು ಸಹ ಮಹಾರಾಜರ ಕೃಪೆಗೆ ಪಾತ್ರರಾಗಬೇಕೆಂಬ ಆಸೆ ತುಂಬಿ ತುಳುಕುತ್ತಿತ್ತು. ಆದರೆ ಅವರಲ್ಲಿ ಸಾಮಾನ್ಯ ಜನರಿಗೆ ಸ್ಥಳವೇ ಇರಲಿಲ್ಲ ಅವರಲ್ಲಿ ವರ್ತಿಸುವಾಗ ಬಿಗುಮಾನ ತಾನೇತಾನಾಗಿ ಬರುತ್ತಿತ್ತು. ಆದರೆ ಅವರ ಮಗ ಕೃಷ್ಣಶಾಸ್ತ್ರಿ ಎಲ್ಲರಿಗೂ ಅಚ್ಚುಮೆಚ್ಚು. ಕೃಷ್ಣಶಾಸ್ತ್ರಿ ಏಕಾಂತ ಪ್ರಿಯ. ತಂದೆಯಿಂದ ಕಲಿತುದನ್ನೇ ಮರದಡಿ, ನದಿಯ ತೀರದಲ್ಲಿ ಕುಳಿತು ಒಬ್ಬನೇ ಹಾಡುತ್ತಿದ್ದ. ಒಮ್ಮೊಮ್ಮೆ ತಿಂಗಳುಗಟ್ಟಲೆ ಹಾಡುವುದನ್ನೇ ಬಿಟ್ಟು ಬಿಟ್ಟು ಹುಚ್ಚನಂತೆ ಅಲೆಯುತ್ತಿದ್ದ.

o o o o

"ಸಹಸ್ರ ರೂಪಾಯಿಗಳೊಂದಿಗೆ ಒಂದು ಶಾಲು ಜೋಡಿ ಬಹುಮಾನ! ದೇವರೇ ಅದನ್ನು ನನ್ನ ಪಾಲಿಗೆ ಕರುಣಿಸಿ ಮಹಾರಾಜರ ಕೃಪೆಗೆ ಪಾತ್ರನಾಗುವಂತೆ ಅನುಗ್ರಹಿಸು." ಹಾಳುಮಂಟಪದ ಮುಂದೆ ನರಸಿಂಹ ಶಾಸ್ತ್ರಿಗಳು ದೇವರನ್ನು ನೆನೆಯುತ್ತಾ ದೇವರಿಗೆ ಮಣಿದು, ತಂಬೂರಿ ಮಿಾಟ ತೊಡಗಿದರು.

ದಿನಕರ ಆಗತಾನೇ ಪಶ್ಚಿಮದ ಕಡಲಿನಲ್ಲಿ ಕಾಲಿಟ್ಟು ಮುಳುಗಿ ಮಾಯವಾಗಿದ್ದ. ಗೂಡು ಸೇರುವ ತವಕದಿಂದ ಚಿಲಿಪಿಲಿ ಸದ್ದು ಮಾಡುತಾ ಪಕ್ಷಿಗಳು ತಮ್ಮ ಗೂಡಿನತ್ತ ಭರದಿಂದ ಸಾಗಿದ್ದವು. ನರಸಿಂಹಶಾಸ್ತ್ರಿಗಳು ಹಾಡುತ್ತಲೇ ಇದ್ದರು. ಕತ್ತಲು ತಾನೇತಾನಾಗಿ ಆ ಮಂಟಪವನ್ನು ಆಕ್ರಮಿಸಿಕೊಂಡಿತ್ತು. ನಿಧಾನವಾಗಿ ಚಂದ್ರ ಮೇಲೇರಿದ್ದ. ಅವನನ್ನು ಕಂಡು ಆನಂದದಿಂದ ಬೆಳ್ಳಿಯ ಚುಕ್ಕೆಗಳು ಮುತ್ತಿಕ್ಕಿದವು.

ಹಾಡಿ ಹಾಡಿ ದಣಿದು ನರಸಿಂಹಶಾಸ್ತ್ರಿಗಳು ತಮ್ಮ ಗಾನವನ್ನು ನಿಲ್ಲಿಸಿ ಮಂಟಪದ ಬಾಗಿಲತ್ತ ನೋಡಿದರು. ಅದು ನಿಶ್ಚಲವಾಗಿ ನಿಂತಿತ್ತು. ಅದನ್ನು ನೋಡಿ ನರಸಿಂಹಶಾಸ್ತ್ರಿಗಳಿಗೆ ಮೇರೆ ಮೀರಿದ ಕೋಪ ಬಂದಿತು. "ನೋಡು ತ್ತೇನೆ ಹೇಗೆ ಬಾಗಿಲು ತೆಗೆಸಲಾಗುವುದಿಲ್ಲ" ಎಂದುಕೊಂಡು ಮಂಟಪ ಬಿಟ್ಟು ಹೊರ ನಡೆದರು.

ಸುಪ್ರಭಾತ ಸಮಯ. ಹಕ್ಕಿಗಳ ಕಲರವದಿಂದ ಉಂಟಾದ ಗಾನ ಎಂತಹವರನ್ನು ಮೋಹಿಸುವಂತಹದು. ನದಿಯಿಂದ ಪ್ರಾತಃಕಾಲದ ವಿಧಿ ಗಳನ್ನು ಮುಗಿಸಿ ಬರುತ್ತಿದ್ದ ಕೃಷ್ಣಶಾಸ್ತ್ರಿ ಮಂಟಪದ ಬಳಿಗೆ ಬಂದಾಗ ತಟ್ಟನೆ ನಿಂತುಬಿಟ್ಟ. ಮುಂದೆ ಹೋಗಲು ಪ್ರಯತ್ನ ಪಟ್ಟರೂ ಆಗಲಿಲ್ಲ. ಯಾವುದೋ ಅಗೋಚರ ಶಕ್ತಿಯೊಂದು ಅವನನ್ನು ಹಿಡಿದು ನಿಲ್ಲಿಸಿದಂತಾ ಯಿತು. ಏನು ಮಾಡಲೂ ತೋಚದೆ ಹಾಳುಮಂಟಪದ ಮೆಟ್ಟಿಲನ್ನು ನಿಧಾನವಾಗಿ ಹತ್ತಿ, ಕುಳಿತು ಹಾಡಲು ಪ್ರಾರಂಭಿಸಿದ. ಮೈಮೇಲೆ ಪ್ರಜ್ಞೆ ಯಿಲ್ಲದೆ ಒಂದರಮೇಲೊಂದರಂತೆ ಹಾಡುತ್ತಲೇ ಇದ್ದ. 'ಸಾಕಯ್ಯ ದೇವ, ಈ ಮೋಹದ ಬಾಳು'....ಶಂಕರಾಭರಣದಲ್ಲಿ ತನ್ನ ಅಜ್ಜ ರಚಿಸಿದ ಕೃತಿಯನ್ನೇ ಎರಡು ಮೂರು ಬಾರಿ ಹಾಡಿದ. ಆದರೂ ಏಕೋ ಸಮಾಧಾನವಾಗಲಿಲ್ಲ ಅದನ್ನೇ ಪುನಃ ಪುನಃ ಹಾಡುತ್ತಿದ್ದ.

ಹೊತ್ತು ಮೂಡುವ ಮುನ್ನವೇ ಹಾಡುತ್ತಿರುವವರಾರು ? ಅದೂ ಆ ಹಾಳುಮಂಟಪದಲ್ಲಿ ! ಕೌತುಕದಿಂದ, ನದಿಯ ಕಡೆಗೆ ನಡೆಯುತ್ತಿದ್ದ ಜನ ಗುಂಪು ಕೂಡ ತೊಡಗಿದರು.

ಬೆಟ್ಟದ ತುದಿಯಿಂದ ಉರುಳುವ ನೀರಿನ ಝರಿಯಂತೆ, ಯಾವ ತಡೆಯೂ ಇಲ್ಲದೆ ಸಾಗಿತ್ತು ಕೃಷ್ಣಶಾಸ್ತ್ರಿಯ ಮಧುರ ಗಾಯನ.

ಪುಂಗಿಯ ನಾದಕ್ಕೆ ಮರುಳಾಗಿ ಹೆಡೆಯಾಡಿಸುವ ಸರ್ಪದಂತೆ, ಅಲ್ಲಿ ನಿಂತಿದ್ದವರು ಕೃಷ್ಣಶಾಸ್ತ್ರಿಯ ಗಾಯನಕ್ಕೆ ಮರುಳಾಗಿ ತಲೆಯಾಡಿಸಲು

ಪ್ರಾರಂಭಿಸಿದ್ದರು. ವೈ ಮರೆತ ಕೃಷ್ಣಶಾಸ್ತ್ರಿ ಹಾಡುತ್ತಲೇ ಇದ್ದ ಬಾಹ್ಯ ಲೋಕದ ಅರಿವಿಲ್ಲದೆ....

"ಹ್ಹೋ ! ಅಲ್ಲಿನೋಡಿ ಕಲ್ಲು ಬಾಗಿಲು ತೆಗೆದುಕೊಂಡಿತು" ಗುಂಪಿನಲ್ಲಿದ್ದವರೊಬ್ಬರು ಆನಂದೋದ್ವೇಗದಿಂದ ಕೂಗಿಕೊಂಡರು. ಅವರ ಕೂಗು ಕಿವಿಗೆ ಬೀಳುವುದೇ ತಡ ಅಲ್ಲಿ ಸಿಂತಿದ್ದವರು ಮಂಟಪದಕಡೆ ನೋಡಿದರು ನಿಜವಾಗಿಯೂ ಬಾಗಿಲು ತೆಗೆದುಕೊಂಡಿತ್ತು. ಮಂದಹಾಸ ಬೀರುತ್ತ ಕೂತಿದ್ದ ದೇವಿಯ ವಿಗ್ರಹವ ಮುಂದೆ ಎರಡು ನಂದಾದೀಪಗಳು ಪ್ರಾಜ್ವಲ್ಯ ಮಾನವಾಗಿ ಉರಿಯುತ್ತಿದ್ದವು. ಧೂಪದ ಕಂಪು ಮಂಟಪದ ಆವರಣವನ್ನೆಲ್ಲಾ ತುಂಬಿತ್ತು. ಅದನ್ನು ಕಂಡ ಜನಸ್ತೋಮ ಕೃಷ್ಣಶಾಸ್ತ್ರಿಯ ಪಾದಕ್ಕೆ ಎರಗಿತು.

ಜನರ ಗಲಭೆಯಿಂದ ಎಚ್ಚೆತ್ತ ಕೃಷ್ಣಶಾಸ್ತ್ರಿ ಕಣ್ತೆರೆದು ನೋಡುತ್ತಾನೆ ತನ್ನ ಸುತ್ತಲೂ ಜನ ನೆರದಿದ್ದಾರೆ. ಏನೂ ಅರ್ಥವಾಗದೆ ಕೃಷ್ಣಶಾಸ್ತ್ರಿ ಗಾಭರಿಯಿಂದ ಮೆಟ್ಟಲಿಳಿದು ಮನೆಯಕಡೆ ಓಡಿದ.

o o o o

"ಸಂತೋಷದ ಸಂಗತಿ ಅಮಾತ್ಯರೇ, ಸಂತೋಷದ ಸಂಗತಿ ! ಅಂತೂ ಮಂಟಪದ ಬಾಗಿಲು ತೆಗೆದುಕೊಂಡಿತಲ್ಲ !! ನಡೆಯಿರಿ, ದೇವಿಯ ದರ್ಶನ ಪಡೆದುಕೊಂಡು ಬರೋಣ"

"ಆಗಲೀ ಮಹಾಪ್ರಭು"

"ಮತ್ತೊಂದು ವಿಷಯ ಅಮಾತ್ಯರೇ, ಸಂಜೆ ದೇವಿಯ ಸನ್ನಿಧಿಯಲ್ಲಿ ಕೃಷ್ಣಶಾಸ್ತ್ರಿಯನ್ನು ಸನ್ಮಾನಿಸಲು ಬೇಕಾದ ಏರ್ಪಾಡುಗಳನ್ನೆಲ್ಲಾ ಮಾಡಿ ಈ ಸಂಗತಿಯನ್ನು ಪ್ರಜೆಗಳಿಗೆಲ್ಲಾ ತಿಳಿಸಿಬಿಡಿ."

"ಅಪ್ಪಣೆ ಪ್ರಭು"

"ನಿನಗೆ ಆ ತಾಯಿ ಒಲಿದು ಬಂದಿದ್ದಾಳೆ ಕೃಷ್ಣಶಾಸ್ತ್ರಿ, ಒಲಿದು ಬಂದಿದ್ದಾಳೆ. ಅವಳ ಸೇವೆಯನ್ನು ಮುಂದೆಯೂ ನೀನೆ ನಡೆಸಿಕೊಂಡು

ಹೋಗಬೇಕು, ನಿನಗೆ ಮಂಗಳವಾಗಲಿ" ಮಹಾರಾಜರು ಪೀತಾಂಬರ ವೊಂದನ್ನು ಕೃಷ್ಣಶಾಸ್ತ್ರಿಗೆ ಹೊದ್ದಿಸುತ್ತಾ ನುಡಿದರು. ಅದನ್ನು ನಮ್ರ ಭಾವದಿಂದ ಸ್ವೀಕರಿಸಿದ ಕೃಷ್ಣಶಾಸ್ತ್ರಿ ತಂದೆ ಕುಳಿತಿದ್ದಲ್ಲಿಗೆ ಬಂದು ಕಾಲಿಗೆ ರಗಿದ. ಅದನ್ನು ಕಂಡ ಜನಸ್ತೋಮ ಆನಂದದಿಂದ ಹರ್ಷೋದ್ಗಾರ ಮಾಡಿ, ಮುಕ್ತ ಕಂಠದಿಂದ ಹರಸಿ ನಡೆಯುತ್ತಿದ್ದರು. ನೀಲಾಕಾಶ ಮೋಡದಿಂದ ತುಂಬಿಕೊಳ್ಳತೊಡಗಿತ್ತು. ತಣ್ಣಗೆ ಗಾಳಿ ಬೀಸಲು ಪ್ರಾರಂಭಿಸಿತು.

"ಅಪ್ಪ ನಡೆಯಿರಿ ಹೋಗೋಣ. ಆಗಲೇ ವೇಳೆ ಮೀರಿದೆ" ಕೃಷ್ಣ ಶಾಸ್ತ್ರಿ ತನ್ನ ತಂದೆಗೆ ಹೇಳಿದ.

ಮಗನ ಮಾತು ನರಸಿಂಹಶಾಸ್ತ್ರಿಗಳಿಗೆ ಹೇಗೆತಾನೆ ಮುಟ್ಟೀತು? ಮಹಾರಾಜರು ಹೇಳಿದ ಮಾತುಗಳೇ ಇನ್ನೂ ಕಿವಿಯಲ್ಲಿ ಮೊರೆಯುತ್ತಿದ್ದವು. ನಿನಗೆ ಆ ತಾಯಿ ಒಲಿದು ಬಂದಿದ್ದಾಳೆ, ಆಕೆಯ ಸೇವೆಯನ್ನು ಮುಂದೆಯೂ ನೀನೇ ನಡೆಸಿಕೊಂಡು ಹೋಗಬೇಕು. ನಿನಗೆ ಮಂಗಳವಾಗಲಿ! ತನ್ನ ಮಗನ ಅಭ್ಯುದಯದ ಬಗ್ಗೆ ತುಂಬು ಹೃದಯದಿಂದ ಆಡಿದ ಮಾತನ್ನು ಕೇಳಿ ತಂದೆಯಾದ ಅವನಿಗೆ ಆನಂದ, ಹರ್ಷಉಂಟಾಗಬೇಕಿತ್ತು. ದುರಾದೃಷ್ಟ ವಶಾತ್ ಹರ್ಷಪಡಬೇಕಾದ ಹೃದಯದಲ್ಲಿ ಈರ್ಷೆಯು ಮೊಳೆ ಬೆಳೆದು ಹೆಮ್ಮರವಾಗಿತ್ತು. ತಾನು ಯಾರದೊಂದು ಹೊಗಳಿಕೆಯ ಮಾತಿಗಾಗಿ ಹಗಲುರಾತ್ರಿ ತವಕಿಸುತ್ತಿದ್ದನೋ, ಅದು ತನ್ನ ಎದುರಿನಲ್ಲಿಯೇ ಇನ್ನೊಬ್ಬನ ವಶವಾದುದ್ದನ್ನು ನೋಡಿ ಅವನ ಮನಸ್ಸು ರೊಚ್ಚಿಗೆದ್ದಿತ್ತು.

"ಮಗನಾದರೇನು? ಯಾರಾದರೇನು? ನಿನ್ನ ಪದವಿ ಪ್ರತಿಷ್ಠೆಗಳನ್ನು ಮಣ್ಣು ಗೂಡಿಸಿದವರು ನಿಜಕ್ಕೂ ನಿನ್ನ ಶತ್ರುಗಳು."

"ಛೀ! ಎಂದಿಗೂ ಅದು ಸರಿಯಲ್ಲ. ಗುಣಕ್ಕೆ ಮತ್ಸರವೇಕೆ? ಅದು ಯಾರಲ್ಲಿ ಮತ್ಸರಪಡುವುದು! ಹೆತ್ತ ಮಗನ ಮೇಲಲ್ಲವೇ? ಬೇಡ ಖಂಡಿತಾ ಬೇಡ."

ಒಂದು ಮನದ ಎರಡು ಮುಖಗಳ ನಿರಂತರ ಹೋಯ್ದಾಟ ನಡದೆ ಇತ್ತು, ನರಸಿಂಹಶಾಸ್ತ್ರಿಗಳ ಮನದಲ್ಲಿ.

ಆದರೇನು? ಮನದ ಮೇಲೆ ದುರ್ಬುದ್ಧಿಯ ವಿಜಯ ಸಾಗಿಯೇ ಇತ್ತು.

ಹೌದು. ಸತ್ಯ! ನನ್ನ ಪಾಂಡಿತ್ಯ ಪದವಿ ಪ್ರತಿಷ್ಠೆಯನ್ನು ಮಣ್ಣು ಗೂಡಿಸಿದವರು ನಿಜಕ್ಕೂ ನನ್ನ ಶತ್ರುಗಳು." ನರಸಿಂಹಶಾಸ್ತ್ರಿಗಳು ಮನದಲ್ಲಿಯೇ ಗೊಣಗಿಕೊಂಡರು.

ಆಗಸದಲ್ಲಿ ದಟ್ಟವಾಗಿ ಮೋಡ ಕವಿದುಕೊಂಡಿತ್ತು. ಗುಡುಗಲು ಪ್ರಾರಂಭವಾಯಿತು.

ಉಳಿದ ಕೆಲವು ಜನರೂ ಆ ಶಬ್ಧಕ್ಕೆ ಬೆಚ್ಚಿ ಬೇಗನೆ ಮನೆ ಸೇರುವ ತವಕದಿಂದ ಹೆಜ್ಜೆ ಹಾಕುತ್ತಿದ್ದರು.

"ಅಪ್ಪಾಜಿ, ನಡೆಯಿರಿ ಹೋಗೋಣ." ತಂದೆಯನ್ನು ಮತ್ತೊಮ್ಮೆ ಎಚ್ಚರಿಸಿದ.

"ಎಲ್ಲಿಗೆ? ಧ್ವನಿಯಲ್ಲಿ ಕರ್ಕಶತೆ ತುಂಬಿ ತುಳುಕುತಿತ್ತು.

"ಎಲ್ಲಿಗೆ! ಮನೆಗೆ" ಕೃಷ್ಣಶಾಸ್ತ್ರಿ ಮರು ನುಡಿದ.

"ನಾನು ಬರುವುದಿಲ್ಲ. ನೀನು ಬೇಕಾದರೆ ಹೋಗಬಹುದು"

"ಏಕಪ್ಪಾ? ನನ್ನ ಮೇಲೆ ಸಿಟ್ಟು"

"ಸಾಕು ನಿಲ್ಲಿಸು, ಕೇಳಲಾರೆ" ಮಗನ ಮಾತು ಕಿವಿಗೆ ಬೀಳುವ ಮೊದಲೇ ಕಿರುಚಿಕೊಂಡರು ಶಾಸ್ತ್ರಿಗಳು.

ಏನೂ ತೋರದಂತಾಯಿತು ಕೃಷ್ಣಶಾಸ್ತ್ರಿಗೆ. ತನ್ನ ತಂದೆಯ ನಡೆವಳಿಕೆಯನ್ನು ಅರ್ಥ ಮಾಡಿಕೊಳ್ಳಲು ಆಗಲೇ ಇಲ್ಲ. ದುಃಖ ಒತ್ತರಿಸಿ ಬಂತು. ಏನೂ ತೋರದೆ ತಂದೆಯ ಕಾಲುಗಳನ್ನು ಭದ್ರವಾಗಿ ಹಿಡಿದುಕೊಂಡು ಅಡ್ಡಬಿದ್ದ.

"ನನಗೆ ತಿಳಿಯದೆ ಏನಾದರೂ ತಪ್ಪಾಗಿದ್ದರೆ ಕ್ಷಮಿಸಿಬಿಡಿ ಅಪ್ಪಾಜಿ.?

"ನಿನ್ನದು ಅಕ್ಷಮ್ಯ ಅಪರಾಧ. ಅದನ್ನು ಕ್ಷಮಿಸಲು ಸಾಧ್ಯವೇ? ಎಂದಿಗೂ ಇಲ್ಲ. ಅಧಿಕ ಪ್ರಸಂಗಿ, ನಿನಗೆ ಹಾಡಲು ಹೇಳಿಕೊಟ್ಟದ್ದೇ ತಪ್ಪಾಯಿತು. ನನ್ನ ಗೌರವ ಘನತೆ ಎಲ್ಲವೂ ನಿನ್ನ ಅಧಿಕ ಪ್ರಸಂಗಿತನದಿಂದಾಗಿ ಮಣ್ಣಿನಲ್ಲಿ ಮಣ್ಣಾಗಿ ಹೋಯಿತು. ನಿನ್ನಂತಹ ಮಗ ಇದ್ದರೆಷ್ಟು, ಇಲ್ಲದಿದ್ದರೆಷ್ಟು? ಕಾಲೆಳೆದುಕೊಳ್ಳುತ್ತಾ ನರಸಿಂಹಶಾಸ್ತ್ರಿಗಳು ನುಡಿದರು.

ಕೃಷ್ಣಶಾಸ್ತ್ರಿಗೆ ಆಗ ತಾನು ಮಾಡಿದ ತಪ್ಪಿನ ಅರಿವಾಯಿತು. ಆದರೂ ಏನು ಮಾಡುವಂತಿರಲಿಲ್ಲ. ಎಲ್ಲವೂ ಕೈಮಿಂಚಿ ಹೋಗಿತ್ತು.

"ಅಪ್ಪ, ಅರಿವಿಲ್ಲವೆ ತಪ್ಪು ಮಾಡಿಬಿಟ್ಟೆ, ದಯಮಾಡಿ ಕ್ಷಮಿಸಿಬಿಡಿ."

"ಮುಚ್ಚು ಬಾಯಿ !"

"ಹಾಗಾದರೆ ನನ್ನ ತಪ್ಪನ್ನು ಕ್ಷಮಿಸುವುದೇ ಇಲ್ಲವೇನು ?"

"ಸಾಧ್ಯವೇ ಇಲ್ಲ."

"ಅಪ್ಪಾಜಿ ಕಣ್ಣಿನಲ್ಲಿ ಕೋಡಿಹರಿಯುತಿತ್ತು.

"ಕ್ಷಮಿಸುತ್ತೇನೆ ! ಆದರೆ ಒಂದು ಮಾತು."

'ಒಂದೇಕೆ ನೂರಾದರೂ ನಡೆಸುತ್ತೇನೆ ಅಪ್ಪಾಜಿ, ಕ್ಷಮಿಸುವುದಿದ್ದರೆ ಜೀವವನ್ನೇ ಕೊಡುತ್ತೇನೆ.'

"ಜೀವ ಕೋಡುವ ಅಗತ್ಯವಿಲ್ಲ."

"ಹಾಗಾದರೆ ಹೇಳಿ, ತಡವೇಕೆ ?

'ಮಾತನ್ನು ಮೀರದೆ ಪಾಲಿಸುವೆಯಾ ?

"ನನ್ನ ಮಾತಿನಲ್ಲಿ ನಂಬಿಕೆಯಿಲ್ಲವೇನು ? ನಿಮ್ಮ ಮಾತಿಗಿಂತಲೂ ನನಗೆ ಮತ್ತಾವುದು ದೊಡ್ಡದು ಅಪ್ಪಾಜಿ ಈ ಜಗದಲ್ಲಿ ? ದಯಮಾಡಿ ಹೇಳಿ ಅನುಮಾನ ಬೇಡ."

"ಮಾತು ಮೀರುವುದಿಲ್ಲವೆಂದು ದೇವಿಯ ಮುಂದೆ ವಚನ ಮಾಡಿ ಹೇಳು."

"ನಾನು ನಿಮಗೆ ನಿಜವಾದ ಮಗನಾಗಿದ್ದರೆ, ಸೂರ್ಯಚಂದ್ರರು ಇರುವುದು ಸತ್ಯವಾದರೆ, ನಾನು ನಿಮ್ಮ ಮಾತನ್ನು ಮೀರುವುದಿಲ್ಲ: ಅದಕ್ಕೆ ದೇವಿಯೇ ಸಾಕ್ಷಿ !"

ಕೃಷ್ಣಶಾಸ್ತ್ರಿಯ ಪ್ರತಿಜ್ಞೆಯನ್ನು ಓಡುತ್ತಿದ್ದ ಗಾಳಿ ಕೇಳಿಸಿಕೊಂಡಿತೊ ಏನೋ ಅದಕ್ಕೆ ದುಃಖ ತಡೆಯಲಾರದೆ ಸುಯ್ಯೋ ಎಂದು ಮೊರೆಯಲು ಪ್ರಾರಂಭಿಸಿತು. ಭೂತದಂತೆ ಬೆಳೆದಿದ್ದ ತೆಂಗಿನಮರಗಳು ಇವನ ಪಿತೃ ಭಕ್ತಿಗೆ ಮೆಚ್ಚಿ ತಲೆದೂಗಿದವು.

"ನೀನು ಇನ್ನು ಮುಂದೆ ಹಾಡಕೂಡದು"

ಕಿವಿಗೆ ಕಾದ ಸೀಸದ ರಸ ಬಿದ್ದಂತಾಯಿತು. ಭೂಮಿ ಬಾಯಿ ತೆರೆದು ತನ್ನನ್ನು ನುಂಗುತ್ತಿರುವಂತೆ ಭಾಸವಾಯಿತು.

"ಫಟ್, ಫಟಾರ್ !"

ಸಿಡಿಲೊಂದು ಎಲ್ಲಿಯೋ ಬಡಿದಿತ್ತು. ಅದರ ಸದ್ದು ಕೇಳಿ ಬೆಚ್ಚಿ ಬಿದ್ದ ಕತ್ತೆ ಅಪಸ್ವರದಲ್ಲಿ ಅರಚಲು ಪ್ರಾರಂಭಿಸಿತು.

ಕೃಷ್ಣಶಾಸ್ತ್ರಿ ಚೇತರಿಸಿಕೊಂಡ.

"ಆಗಲಿ ಅಪ್ಪಾಜಿ, ತಾವು ಕ್ಷಮಿಸುವುದಿದ್ದರೆ ನಾನು ಇನ್ನುಮುಂದೆ ಹಾಡುವುದಿಲ್ಲ"

"ಕ್ಷಮಿಸಿದ್ದೇನೆ. ಆದರೆ ಮುಂದೆ ಎಂತಹ ಸಂದರ್ಭದಲ್ಲೂ ಹಾಡಬಾರದು."

"ಇಲ್ಲ ಖಂಡಿತವಾಗಿಯು ಹಾಡುವುದಿಲ್ಲ."

"ಖಂಡಿತವೋ?"

"ಅದು ಸೂರ್ಯನಷ್ಟು ಪ್ರಕಾಶ."

ನರಸಿಂಹಶಾಸ್ತ್ರಿಗಳ ಮುಖದಲ್ಲಿ ವಿಜಯದ ಉನ್ಮಾದ ತುಂಬಿ ತುಳುಕುಕುತ್ತಿತ್ತು. ಅವರ ಮುಖದಲ್ಲಿ ಭೂತ ತೃಪ್ತಿ ತಾನೇ ತಾನಾಗಿ ನಾಟ್ಯವಾಡತೊಡಗಿತ್ತು.

ಕೃಷ್ಣಶಾಸ್ತ್ರಿಗೆ ಅಲ್ಲಿ ನಿಲ್ಲಲಾಗಲಿಲ್ಲ. ತಂದೆಗೆ ಮತ್ತೊಮ್ಮೆ ಮಣಿದು ದೇವಿಯ ವಿಗ್ರಹದ ಕಡೆಗೊಮ್ಮೆ ಭಕ್ತಿಯಿಂದ ನೋಡಿ ಧೃಡಹೆಜ್ಜೆಗಳನ್ನಿಡುತ್ತಾ ಮಂಟಪ ದಾಟಿ ನಡೆದು ಕತ್ತಲಲ್ಲಿ ಕಾಣದಂತಾದ.

ತನ್ನ ತಂದೆಯ ಅನುಗ್ರಹಕ್ಕೆ ಪಾತ್ರನಾಗಿ ಹೊರ ನಡೆದಿದ್ದ ಆ ಮಗನನ್ನು ಕಂಡು ಪ್ರಕೃತಿ ಮಾತೆಗೆ ತಡೆಯಲಾರದ ದುಃಖ ಬಂದಿತ್ತು. ತನ್ನ ಕಣ್ಣೀರನ್ನು ಮಳೆಯ ರೂಪದಲ್ಲಿ ತನ್ನ ಮಗನ ಮೇಲೆ ಧಾರಾಕಾರವಾಗಿ ಸುರಿಸಲು ಪ್ರಾರಂಭಿಸಿದಳು.

# ಅಯ್ಯನ ಕೆರೆ

"ಅವಳು ಮುಂದೆ ಮಾತಾಡುವಷ್ಟರಲ್ಲಿಯೇ ವೆಂಕಟಪ್ಪ ಅವಳ ಸೆರಗನ್ನು ಜಾರಿಸಿದ್ದ. ಪುಟ್ಟಿ ಕೊಸರಿಕೊಳ್ಳಲು ಮಾಡಿದ ಪ್ರಯತ್ನ ವಿಫಲವಾಗಿತ್ತು. ಹೊರಗೆ ನಿಂತಿದ್ದ ಸಾಬಿ ಕಿಸ್ಸನೆ ನಕ್ಕು ಬಾಗಿಲು ಎಳೆದುಕೊಂಡ. ಸ್ವಲ್ಪ ಹೊತ್ತು ಕಳೆದಿರಬಹುದು, ದಫೇದಾರ ವೆಂಕಟಪ್ಪ ಬೀಡಿ ಹಚ್ಚಿಕೊಳ್ಳುತ್ತಾ ಹೊರ ಬಂದ. ಕಾನ್‌ಸ್ಟೇಬಲ್ ಸೈಯದ್ ಒಳತೂರಿದ, ಅವನಾದ ಮೇಲೆ ರಾಮಯ್ಯ...... ಅವನ ಹಿಂದೆ ಕೇಶವ.......ಒಬ್ಬರಾದ ಮೇಲೆ ಒಬ್ಬರು......."

# ೮

ದಢಾರನೆ ಶಬ್ಧವಾದುದನ್ನು ಕೇಳಿ ಆಗತಾನೆ ನಿದ್ದೆಯ ಜೋಂಪು ಹತ್ತುತ್ತಿದ್ದ ರಾಜಿಗೆ ಪಕ್ಕನೆ ಎಚ್ಚರವಾಯಿತು. ಶಬ್ಧ ಏನೆಂದು ಆಲಿಸಿದಳು ಏನೂ ಇಲ್ಲ. ಮತ್ತೆ ಮಗ್ಗಲು ಹೊರಳಿ ಕಣ್ಣು ಮುಚ್ಚಿ ಮಲಗಲು ಪ್ರಯತ್ನಿಸಿದಳು.

ಬಾಗಿಲು ಬಡಿಯುವ ಸದ್ದು. ಮುಂಬಾಗಿಲನ್ನು ಯಾರೋ ಬಡಿಯುತ್ತಿದ್ದಾರೆ. ಅಪರಾತ್ರಿಯಾದರೂ ಇವರುಗಳ ಸೇವೆಮಾಡಿ ಸಾಯಬೇಕು. ಏನು ಹಾಳು ಕೆಲಸವೋ ಎಂದು ಗೊಣಗುಟ್ಟುತ್ತಲೇ ಎರಡು ಮೂರು ಬಾರಿ ಗಂಡನ ಭುಜ ಅಲ್ಲಾಡಿಸಿ ರಾಜಿ ಹೇಳಿದಳು.

"ಹೊರಗಡೆ ಯಾರೋ ಬಾಗಿಲು ಬಡಿಯುತ್ತಿದ್ದಾರೆ."

"ಯಾರು ?"

ಮುಸುಕು ತೆಗೆಯದೆ ದಫೇದಾರ ವೆಂಕಟಪ್ಪ ಮಡದಿಯನ್ನು ಕೇಳಿದ,

"ಗೊತ್ತಿಲ್ಲ,"

"ಹೊತ್ತು ಗೊತ್ತು ಅನ್ನುವುದೇ ಇಲ್ಲ. ಓಂದೇ ಸಮನೇ ಚಾಕರಿ ಮಾಡಬೇಕು. ಸಾಯಲಿ, ಸುಮ್ಮನೆ ಮಲಗಿಕೋ."

ರಾಜಿಗೆ ಗಂಡನ ಕಷ್ಟದ ಪರಿಚಯವಿಲ್ಲದೆ ಇಲ್ಲ. ಮಧ್ಯರಾತ್ರಿಯಲ್ಲಿ ಹೊಡೆದಾಟವಾಗುತ್ತಿದೆ, ಎಂದು ಯಾರಾದರೂ ಹೇಳಿದರೆ ಎದ್ದು ಹೋಗಬೇಕು. ಯಾರದೋ ತೋಟದಲ್ಲಿ ಕಳ್ಳತನವಾಯಿತು ಎಂದರೆ ಓಡಿ ಹೋಗಬೇಕು. ಯಾರೋ ಆತ್ಮಹತ್ಯೆ ಮಾಡಿಕೊಂಡರೂ ಅಂದರೆ, ಹೋದವರ ಜೊತೆಗೆ ಇವರೂ ಸಾಯಬೇಕು. ಏನುಹಾಳು ಕೆಲಸವೋ ಎಂದುಕೊಳ್ಳುತ್ತಾ ಅವಳು ಸುಮ್ಮನೆ ಮಲಗಿದಳು.

ಎರಡು ನಿಮಿಷ ಕಳೆದಿರಬಹುದು. ಮತ್ತೆ ಬಾಗಿಲು ಒಂದೇ ಸಮನೆ ಬಡಿಯುವ ಸದ್ದು ವೆಂಕಟಪ್ಪನ ನಿದ್ದೆ ಆಗಲೇ ಕಣ್ಣಿನಿಂದ ಹಾರಿಹೋಗಿತ್ತು. ಹಾಸಿಗೆಯ ಮೇಲೆ ಹಾಗೆಯೇ ಎದ್ದು ಕುಳಿತು ಸಿಟ್ಟಿನಿಂದ ಕೇಳಿದ, "ಯಾರು ?"

ಪಕ್ಕದಲ್ಲಿದ್ದ ಬೀಡಿಯ ಕಟ್ಟಿನಿಂದ ಒಂದನ್ನು ಎಳೆದುಕೊಂಡು ಬೆಂಕಿ ಹೊತ್ತಿಸಿ, ಒಂದು ಧಂ ಎಳೆದು :ಹೊಗೆ ಬಿಟ್ಟ. ಹೊರಗಡೆಯಿಂದ ಉತ್ತರವಿಲ್ಲ.

ಮತ್ತೆ ಎರಡು ಘಳಿಗೆ ಕಳೆದಿರಬಹುದು. ಬಾಗಿಲು ಬಡಿಯವುದು ಕೇಳಿಸಿತು. ಹಾಳಾದವರು ಮಾತು ಕೂಡ ಆಡೋದಿಲ್ಲ, ಎಂದುಕೊಳ್ಳು ತ್ತಲೇ ದೀಪ ಹಚ್ಚಿ ಮುಂಬಾಗಿಲು ತೆಗೆದ.

ಯಾರೂ ಕಾಣಲಿಲ್ಲ. ನಾಲ್ಕು ಹೆಜ್ಜೆ ಹೊರಬಂದು ಸುತ್ತಲೂ ನೋಡಿದ. ಯಾರ ಪತ್ತೆಯೂ ಇಲ್ಲ. ಶಪಿಸುತ್ತಾ ಒಳ ಬಂದು, ಬಾಗಿಲು ಹಾಕಿಕೊಂಡ.

"ಯಾರು ಬಾಗಿಲು ಬಡಿದವರು ?"

—ಮಲಗಿದ್ದ ರಾಜಿ ಕೇಳಿದಳು.

'ಯಾವ ಮುಂಡೆವೋ. ಹೊಡೆದುಕೊಂಡವು ಎಂದು ತೆಗೆದರೆ ಅಷ್ಟರಲ್ಲೇ ಎಲ್ಲೋ ಹಾಳಾಗಿ ಹೋಗಿವೆ"

"ಪೀಡೆ ಕಳೆಯಿತು. ಬಂದು ಮಲಗಿ"

ಮತ್ತೊಮ್ಮೆ ಕೈಯಲ್ಲಿದ್ದ ಬೀಡಿಯಿಂದ ಹೊಗೆ ಎಳೆದು, ನೆಲಕ್ಕೆ ಉಜ್ಜಿ ಆರಿಸಿದ. ಮೇಲೆ ಒಣಹಾಕಿದ್ದ ಸೀರೆ ಕೆಳಗೆ.ಬಿದ್ದಿತ್ತು.

"ನೋಡು ಸೀರೆ ಬಿದ್ದಿದೆ. ಎದ್ದು ತೆಗೆದಿಡು, ಸರಿಯಾಗಿ ಒಣಹಾಕುವು ದಲ್ಲವಾ ?'

"ಅರೆ, ಗಳುವಿನ ಮಧ್ಯಕ್ಕೆ ಸರಿಯಾಗಿ ಒಣಹಾಕಿದ್ದೇನೆ, ಯಾಕೆ ಬಿತ್ತು ?"

'ಬಾಗಿಲು ತೆಗೆದಾಗ ಗಾಳಿಗೆ ಬಿದ್ದಿರಬೇಕು"

ಹಾಸಿಗೆಯಿಂದ ಎದ್ದ ರಾಜಿ ಸೀರೆ ಮಡಿಸಿಟ್ಟು, ಬಚ್ಚಲಿಗೆ ಹೋಗಿ ಕಾಲುತೊಳೆದುಕೊಂಡು ಬಂದು ಕೇಳಿದಳು.

"ದೀಪಾ ಆರಿಸಲೇ ?"

"ಬೇಡ ಇಲ್ಲಿ ಬಾ"

ನಿಂತಿದ್ದ ಮಡದಿಯ ಕೈ ಹಿಡಿದು ತನ್ನತ್ತ ಎಳೆದುಕೊಂಡ.

"ಕೈ ಬಿಡಿ ಅಂದ್ರೆ. ಈಗ ನಿದ್ದೆ ಬರುತ್ತಾಯಿದೆ."

ವೆಂಕಟಪ್ಪ ಅವಳನ್ನು ಆಗಲೇ ತನ್ನ ತೋಳಿನಲ್ಲಿ ಬಂಧಿಸಿದ್ದ.

"ಅಯ್ಯಪ್ಪ...."

ಒಮ್ಮೆಯೇ ತನ್ನ ಹಿಡಿತವನ್ನು ಸಡಿಲವಾಡಿದ ವೆಂಕಟಪ್ಪ ಉದ್ಗರಿಸಿದ. ಆಶ್ಚರ್ಯದಿಂದ ಗಂಡನತ್ತ ನೋಡಿದ ರಾಜಿ ಕೇಳಿದಳು.

"ಯಾಕೆ, ಏನಾಯಿತು ?"

"ಬೆನ್ನ ಮೇಲೆ ಯಾಕೆ ಗುದ್ದಿದೆ"

"ಯಾರು ? ನಾನೆ !"

ಆಶ್ಚರ್ಯದಿಂದ ಕೇಳಿದಳು ರಾಜಿ.

"ಮತ್ತೆ ಯಾರು ? ತಮಾಷಿ ಮಾಡುತ್ತಿಯೇನು" ?

ಅಷ್ಟರಲ್ಲೇ ವೆಂಕಟಪ್ಪನ ಬೆನ್ನಿಗೆ ಮತ್ತೊಂದು ಬಲವಾದ ಗುದ್ದು. ಆ ಏಟಿಗೆ ಅವನ ಕಣ್ಣು ಮಂಜು ಮಂಜಾಯಿತು. ಎದುರಾಗಿಯೇ ರಾಜಿ ಕೂತಿದ್ದಾಳೆ. ಹಾಗಾದರೆ ಬೆನ್ನ ಮೇಲೆ ಗುದ್ದಿದವರು ಯಾರು ? ತಿರುಗಿ ನೋಡಿದ ಯಾರು ಇಲ್ಲ.

"ಏನೂ ಅಂದ್ರೆ, ಯಾಕೆ ಈ ರೀತಿಯಾಗಿದ್ದೀರಿ ?"

ಗಂಡ ಸುತ್ತಲೂ ನೋಡುವುದನ್ನು ಕಂಡು ರಾಜಿ ಮತ್ತೆ ಕೇಳಿದಳು

"ಮತ್ತೆ ಯಾರೋ ಗುದ್ದಿದ ಹಾಗೆ ಆಯಿತು. ಅದಕ್ಕೆ ನೋಡಿದೆ."

ವೆಂಕಟಪ್ಪನ ಮಾತು ಮುಗಿಯುವುದರೊಳಗೆ ರಾಜಿ ಗಟ್ಟಿಯಾಗಿ ಕಿರುಚಿಕೊಂಡಳು.

"ಯಾರೋ ನನ್ನ ಸೆರಗು ಎಳೆಯುತ್ತಿದ್ದಾರೆ ರ್‍ರೀ...."

ಮಡದಿಯತ್ತ ನೋಡಿದ. ಎದೆಯ ಮೇಲೆ ಸೆರಗಿಲ್ಲ. ಸೆರಗು ಕೆಳಗಡೆ ಬಿದ್ದಿದೆ. ಈಗ ಅವನ ಗುಂಡಿಗೆ ಭಯದಿಂದ ಅಳುಕಿತು. ಏನೂ ಅರ್ಥವಾಗದೆ ಒಮ್ಮೆ ಕೋಣೆಯ ಸುತ್ತಲೂ ನೋಡಿದ ಏನೂ ಕಾಣಲಿಲ್ಲ.

ರಾಜಿ ಹೆದರಿ ಕಂಗಾಲಾಗಿ ಗಂಡನ ಕೈಯನ್ನು ಬಲವಾಗಿ ಹಿಡಿದು ಕೊಂಡಿದ್ದಳು. ಅವಳಿಗೆ ಉಸಿರಾಡುವುದಕ್ಕೂ ಭಯ.

ಅಡಿಗೆಯಮನೆಯಲ್ಲಿ ಪಾತ್ರೆಗಳು ಬಿದ್ದ ಸದ್ದು, ಬಿದ್ದ ಪಾತ್ರೆಗಳನ್ನು ಝಾಡಿಸಿ ಒದೆಯುತ್ತಿರುವಂತಾಯಿತು. ನೀರು ಕುಡಿಯುವ ಲೋಟ ಹಾಲಿಗೆ ಬಂದು ಬಿದ್ದಿತ್ತು.

ವೆಂಕಟಪ್ಪ ಏಳಲು ಹೊರಟ. ರಾಜಿ ಅವನ ಕೈಯನ್ನು ಬಲವಾಗಿ ಹಿಡಿದುಕೊಂಡು ಅಳುತ್ತಾ ಹೇಳಿದಳು. "ಯಾಕೋ ಭಯವಾಗುತ್ತಿದೆ. ಹೋಗಬೇಡಿ"

"ಭಯ ಯಾಕೆ ? ಬೆಕ್ಕು ಬಂದಿರಬೇಕು, ನೋಡುತ್ತೇನೆ ನಿಲ್ಲು"

ಅವಳ ಕೈ ಬಿಡಿಸಿಕೊಂಡ ವೆಂಕಟಪ್ಪ ಅಡಿಗೆ ಕೋಣೆಗೆ ನಡೆದ. ಪಾತ್ರೆಗಳೆಲ್ಲವೂ ದಿಕ್ಕಾಪಾಲಾಗಿ ಬಿದ್ದಿದ್ದವು. ಅರಸಿನ ಕುಂಕುಮದ ಸೂರೆ. ಸುತ್ತಲೂ ನೋಡಿದ ಬೆಕ್ಕು ಕಾಣಲಿಲ್ಲ. ಕೆಳಗಡೆ ಬಿದಿದ್ದ ಪಾತ್ರೆ ತೆಗೆಯಲು ಬಗ್ಗಿದ.

ಬೆನ್ನ ಮೇಲೆ ಮತ್ತೆ ಬಲವಾದ ಗುದ್ದು. ಆ ಏಟಿನಿಂದ ಕರುಳು ಬಾಯಿಗೆ ಬಂದಂತೆ ಆಯಿತು. ಸರ್ರನೆ ತಿರುಗಿ ನೋಡಿದ. ಯಾರೋ ಓಡಿದಂತಾಯಿತು. ಕಾಲಿನ ಗೆಜ್ಜೆಯ ಸದ್ದು, ವೆಂಕಟಪ್ಪ ಹಾಲಿನತ್ತ ಓಡಿದ. ರಾಜಿ ಭಯದಿಂದ ಕಂಗೆಟ್ಟು ಹಾಸಿಗೆಯಲ್ಲಿ ಮುದುಡಿ ಕುಳಿತಿದ್ದಳು.

"ಈ ಕಡೆ ಯಾರಾದರೂ ಬಂದರೇನು ?"

ಮಡದಿಯನ್ನು ಕೇಳಿದ

"ಇಲ್ಲ"

ಅಡುಗೆಕೋಣೆಯಲ್ಲಿ ಮತ್ತೆ ಪಾತ್ರೆಗಳನ್ನು ಒದ್ದಾಡಿದ ಶಬ್ದ. ಮೂಲೆಯಲ್ಲಿದ್ದ ಲಾಟ ತೆಗೆದುಕೊಂಡು ವೆಂಕಟಪ್ಪ ಮತ್ತೆ ಒಳ ಹೋದ. ಈ ಭಾರಿ ಕೆಳಗೆ ಬಿದಿದ್ದ ಕುಂಕುಮದ ಮೇಲೆ ನೀರೆಲ್ಲಾ ಚೆಲ್ಲಿ ರಕ್ತದ ಮಡುವಿನಂತೆ ಕಾಣುತಿತ್ತು.

ಗೆಜ್ಜೆಯ ಸದ್ದು. ಯಾರೋ ಹೊರ ಓಡಿದಂತೆ ಆಯಿತು. ಶಬ್ಧ

ಬಂದತ್ತ ವೆಂಕಟಪ್ಪ ಧಾವಿಸಿದ. ರಾಜಿ ಕಣ್ಣೀರು ಬೀಡುತ್ತಿದ್ದಾಳೆ. ಮತ್ತೆ ಯಾರು ಇಲ್ಲ.

"ಗೆಜ್ಜೆಯ ಶಬ್ದ ಕೇಳಿದೆಯಾ ?"

"ಹೌದು, ಯಾರೋ ಈ ಕಡೆ ಓಡಿ ಬಂದ ಹಾಗೆ ಆಯಿತು. ಆದರೆ ಯಾರು ಕಾಣಲಿಲ್ಲ."

ವೆಂಕಟಪ್ಪನ ಭೀಮ ಗುಂಡಿಗೆಯು ಈಗ ಭಯದಿಂದ ಕಂಪಿಸತೊಡಗಿತ್ತು. ಸಂದೇಹವೇ ಇಲ್ಲ. ಇದು ದೆವ್ವದ ಉಪಟಳವೇ ಇರಬೇಕು. ಇಲ್ಲವಾದರೆ ಹೀಗೇಕೆ ಆಗಬೇಕು. ?

ತನ್ನ ಅಧೈರ್ಯ ರಾಜಿಗೆ ಗೊತ್ತಾದರೆ ಆವಳಲ್ಲಿ ಮತ್ತೆ ಭಯಪಡುತ್ತಾಳೋ ಎಂದುಕೊಂಡು, ಅವಳನ್ನು ಸಮಾಧಾನ ಪಡಿಸಲು ಹೇಳಿದ.

"ಹೆದರಿಕೊಳ್ಳಬೇಡ, ಏನಿದ್ದರೂ ಸರಿ ಈ ದಫೇದಾರ ವೆಂಕಟಪ್ಪನ ಬಳಿ ಸಾಗುವುದಿಲ್ಲ." ಎಂದು ಕೈಯಲ್ಲಿದ್ದ ಲಾಟಿಯನ್ನೊಮ್ಮೆ ನೆಲಕ್ಕೆ ಕುಟ್ಟಿ ಮುಂಬಾಗಿಲು ತೆಗೆದು ಕೂಗಿದ.

"ರಾಮಯ್ಯಾ....ಏ ಕೇಶವ....

ಉತ್ತರವಿಲ್ಲ.

ಮತ್ತೆ ಗಟ್ಟಿಯಾಗಿ ಕೂಗಿದ. ಅಷ್ಟು ಮಾಡುವುದರಲ್ಲಿ ಅವನು ಸಂಪೂರ್ಣವಾಗಿ ಬೆವತುಬಿಟ್ಟಿದ್ದ. ಅಂತಹ ಕೊರೆಯುವ ಚಳಿಯಲ್ಲೂ ಮುಖದ ಮೇಲೆ ಬೆವರು ಕಾಣಿಸಿಕೊಂಡಿತ್ತು. ಅವನ ಜೀವನದಲ್ಲಿಯೇ ಮೊದಲ ಬಾರಿಗೆ ಹೀಗಾಗಿತ್ತು.

ಮತ್ತೊಮ್ಮೆ ಗಟ್ಟಿಯಾಗಿ ಕೂಗಿದ.

"ಓ....ಬಂದೇ...."

ಪೋಲೀಸ್ ಸ್ಟೇಷನ್ನಿನಲ್ಲಿ ಮಲಗಿದ್ದ ರಾಮಯ್ಯ ವೆಂಕಟಪ್ಪನ ಕೂಗಿಗೆ ಓಗೊಟ್ಟ. ಐವತ್ತು ದಾಪು ಹೆಜ್ಜೆ ಹಾಕಿದರೇನೆ ಪೋಲೀಸ್ ಸ್ಟೇಷನ್ ಸಿಗುತ್ತದೆ.

ಲಾಂದ್ರದ ಬತ್ತಿ ದೊಡ್ಡದು ಮಾಡಿದ ರಾಮಯ್ಯ. ಮಲಗಿದ್ದ ಕೇಶವರ ಸೈಯದ್‌ನನ್ನು ಎಳಿಸಿ ಹೇಳಿದ.

"ದಫೇದಾರರು ಕೂಗ್ತಾ ಇದ್ದಾರೆ. ನಡಿರಲೋ"

"ಯಾರು ಸತ್ತರಂತೆ?" ಸೈಯದ್ ಮತ್ತೆ ಕಣ್ಣುಮುಚ್ಚಿ ಹೊದಿಕೆ ಮುಖದವರೆವಿಗೂ ಎಳೆದುಕೊಳ್ಳುತ್ತಾ ಕೇಳಿದ.

ಸಾಬಿಯನ್ನು ಏಳಿಸಿಕೊಂಡು ಹೋಗುವುದು ಅಷ್ಟು ಸುಲಭವಲ್ಲ ವೆಂದು ತಿಳಿದ ರಾಮಯ್ಯ ಕೇಶವನೊಂದಿಗೆ ದಫೇದಾರರ ಮನೆಯತ್ತ ನಡೆದ.

ದೂರದಲ್ಲಿ ಬರುತ್ತಿದ್ದ ರಾಮಯ್ಯ ಕೇಶವನನ್ನು ನೋಡಿ ವೆಂಕಟಪ್ಪ ನಿಗೆ ಕರಗಿ ಹೋಗಿದ್ದ ಧೈರ್ಯ ಮತ್ತೆ ತಹಬಂದಿಗೆ ಬರತೊಡಗಿತು.

ಮತ್ತೆ ಗೆಜ್ಜೆಯ ಸದ್ದು ಯಾರೋ ಧಡಧಡನೆ ಮೆಟ್ಟಲು ಇಳಿದು ಮನೆಯ ಹಿಂದಕ್ಕೆ ಓಡಿಹೋದ ಹಾಗೆ ಆಯಿತು. ನಿಂತಲ್ಲಿಯೇ ನಡುಗಿದ ವೆಂಕಟಪ್ಪ.

"ಯಾಕೆ ಬುದ್ಧಿ, ಕೂಗಿದಿರಿ? ಕೈಯಲ್ಲಿದ್ದ ಲಾಂದ್ರವನ್ನು ಜಗಲಿಯ ಮೇಲೆ ಇಡುತ್ತಾ ಕಾನಿಸ್ಟೇಬಲ್ ರಾಮಯ್ಯ ಕೇಳಿದ.

ಏನೆಂದು ಹೇಳುವುದು? ತಾನು ಭಯಪಟ್ಟಿದ್ದನ್ನು ಅಷ್ಟು ಸುಲಭ ವಾಗಿ ವೆಂಕಟಪ್ಪ ಹೇಳಿಕೊಳ್ಳುವಂತಿರಲಿಲ್ಲ. ಆದರೂ ಸೂಕ್ಷ್ಮವಾಗಿ ನಡೆದುದನ್ನು ಹೇಳಿದ.

ದಫೆದಾರರು ಹೇಳುವುದನ್ನು ಕೇಳುತ್ತಿದ್ದ ಕೇಶವ ಭಯದಿಂದ ನೀರಾ ಗಿದ್ದ. ಎಲ್ಲಾದರೂ ತನ್ನ ಬೆನ್ನಿಗೂ ಒಂದು ದೆವ್ವ ಗುದ್ದಿದರೆ? ರಾಮ ಯ್ಯನ ಹಿಂದುಗಡೆ ನಿಂತಿದ್ದವನು, ಕಾಲು ತುರಿಸಿಕೊಳ್ಳುವ ನೆವದಲ್ಲಿ ಮುಂದಕ್ಕೆ ಬಂದು, ಲಾಂದ್ರದ ಬೆಳಕಿನಲ್ಲಿ ಕುಳಿತ.

ಈ ರೀತಿ ಹಿಂದೆ ಎಂದಾದರೂ ಆಗಿತ್ತೇ ರಾಮಯ್ಯ?"

"ಈ ಊರಿನಲ್ಲಿ ದೆವ್ವಾ.... ಜಕ್ಕಣಿ ಇದೆ ಎಂದು ಎಲ್ಲರೂ ಮಾತನಾಡಿ ಕೊಳ್ಳುತ್ತಾರೇ ವಿನಃ ಈ ರೀತಿ ಆದುದಿಲ್ಲ. ಅದೂ ಊರ ಮುಂದಿನ ಹಾಳು ಮನೆಯಲ್ಲಿ ಮಾತ್ರ ವಾಸ ಮಾಡುತ್ತದೆ ಎಂದು ಬಲ್ಲವರು ಹೇಳುತ್ತಾರೆ,"

"ಹಾಗಾದರೆ ಏನಿದು?"

ಏನೋ ಸ್ವಾಮಿ ನನಗೊಂದು ಅರ್ಥವಾಗೋದಿಲ್ಲ"

"ಸಂಬಂಧವಿಲ್ಲದೆ ದೆವ್ವಗಳು ತೊಂದರೆ ಕೊಡುವುದಿಲ್ಲವಂತೆ ಬುದ್ಧಿ"

ಕೇಶವ ಹೇಳಿದ. ಅವನ ಧ್ವನಿ ಆಗಲೇ ಭಯದಿಂದ ಕೀಚಲಾಗಿತ್ತು.

"ಅಂದರೆ?" ಅವನ ಮಾತು ಅರ್ಥವಾಗದೆ ವೆಂಕಟಪ್ಪ ಕೇಳಿದ.

"ಹಿಂದೆ ಅದಕ್ಕೆ ಬಹುತೊಂದರೆ ಮಾಡಿದ್ದರೆ ಮಾತ್ರ ಅದು ಉಪದ್ರವ ಕೊಡುತ್ತದಂತೆ.

ಏನಿದ್ದರೂ ಬೆಳಿಗ್ಗೆ ವಿಚಾರ ಮಾಡಾನಾ. ಹೋಗಿ ಮಲಕೊಳ್ಳಿ ಸ್ವಾಮಿ ನಾನು ಕೇಶವ ಇಲ್ಲೇ ಮಲಗಿರ್ತೀವಿ, ಒಂದು ಚಾಪೆ ಕೊಡಿ."

"ಹಾಗೇ ಮಾಡಿ" ಎಂದು ವೆಂಕಟಪ್ಪ ಒಂದು ಚಾಪೆ ಎರಡು ತಲೆ ದಿಂಬನ್ನು ಕೊಟ್ಟು ಬಾಗಿಲು ಹಾಕಿಕೊಂಡು ಹಾಸಿಗೆಯ ಬಳಿ ಬಂದ ದೀಪ ಆರಿಸದೆ ಹಾಗೆಯೇ ಮಲಗಿದ. ಗಂಡನನ್ನು ಬಲವಾಗಿ ತಬ್ಬಿಕೊಂಡು ರಾಜ ಮಲಗಿದಳು. ಇಬ್ಬರಿಗೂ ನಿದ್ದೆಯಿಲ್ಲ.

"ಅದಕ್ಕೆ ಬಹು ತೊಂದರೆ ಮಾಡಿದ್ದರೆ ಮಾತ್ರ ಉಪದ್ರವ ಕೊಡುತ್ತದಂತೆ ಇಲ್ಲವಾದರೆ ಅದು ಯಾರ ತಂಟೆಗೂ ಬರಾಕಿಲ್ಲ....ಅಂಜು ಕುಳಿ ಕೇಶವನ ಮಾತು....ಯಾರಿಗೆ ಹೇಳಿಕೊಳ್ಳುವಂತಹ ತೊಂದರೆ ಮಾಡಿದ್ದೇನೆ ಎಂದು ಹಾಗೆಯೇ ಕಣ್ಣುಮುಚ್ಚಿ ಯೋಚಿಸತೊಡಗಿದ. ಹೇಳುವಂತಹ ಅನ್ಯಾಯ ಯಾರಿಗೆ ಮಾಡಿದಕ್ಕೆ ದೆವ್ವವಾಗಿ ಕಾಡಬೇಕು? ಗಕ್ಕನೆ ಪುಟ್ಟಿ ಬಂದು ಎದುರು ನಿಂತಂತೆ ಆಯಿತು............

"ದಮ್ಮಯ್ಯ ಬಿಟ್ಬುಬಿಡ್ರಣ್ಣ...." ಪುಟ್ಟಿ ಕಣ್ಣೀರು ಸುರಿಸುತ್ತಾ ವೆಂಕಟಪ್ಪನ ಮುಂದೆ ನಿಂತು ಅಂಗಲಾಚಿ ಬೇಡುತ್ತಿದ್ದಳು.

"ಥೂ ಬೇವಾರ್ಸಿ ನನಗೆ ಮೋಸಮಾಡ್ತೀಯ?"

"ಖಂಡಿತಾ ಇಲ್ಲ ಕಣಣ್ಣ ವ್ಯಾಪಾರ ಆಗಿದ್ದರೆ ಮಾಮೂಲು ತಪ್ಪಿಸ್ತಾಯಿದ್ದೆನಾ? ವ್ಯಾಪಾರ ಆಗದೆ ನಾಲ್ಕು ದಿನ ಆಯಿತು.

ಪುಟ್ಟಿ, ಅವಳ ಅವ್ವಾ ತಾಯಮ್ಮ ಉಜ್ರೆಯ ಒಂದು ಗಲ್ಲಿಯ ಹಟ್ಟಿಯಲ್ಲಿ ಕಳ್ಳಭಟ್ಟಿ ವ್ಯಾಪಾರ ಮಾಡುತ್ತಾರೆ. ಅದು ಎಲ್ಲರಿಗೂ ಗೊತ್ತಿದ್ದ ಸಂಗತಿ. ಆದರೂ ಅದರ ಬಗ್ಗೆ ಒಂದು ಮಾತು ಆಡುವವರಿಲ್ಲ ಅದಕ್ಕೆ ಅಲ್ಲಿಯ ಪೋಲೀಸಿನವರ ಬೆಂಬಲ. ಇಂತಿಷ್ಟು ಮಾಮೂಲು ಎಂದು ರೊಕ್ಕ, ಕುಡಿಯಲು ಸ್ವಲ್ಪ ಕಳ್ಳು ಪೋಲೀಸಿನವರಿಗೆ ಕೊಟ್ಟರೆ ತೀರಿತು. ಯಾವ ಆಂತಕವೂ ಇಲ್ಲದೆ ವ್ಯಾಪಾರ ಸಾಗಿಸಬಹುದು.

ನಾಲ್ಕು ದಿನಗಳ ಹಿಂದೆ ಮಾಮೂಲಿಗೆಂದು ಕೇಶವ ಪುಟ್ಟಿಯ ಹಟ್ಟಿಗೆ ಹೋದ. ಕಳ್ಳು ವ್ಯಾಪಾರವಾಗದೆ ನಾಲ್ಕುದಿನವಾಗಿತ್ತು.

ಪುಟ್ಟಮ್ಮ ಎಲ್ಲಿ ಮಾಮೂಲು ?

"ವ್ಯಾಪಾರವೇ ಆಗಿಲ್ಲ ಕೇಸಣ್ಣ.

ಮೂರುದಿನದಿಂದಲೂ ಹಿಂಗೆ ಅಂತೀಯಲ್ಲಾ ! ಏನು ಸಮಾಚಾರ"

"ಏನು ಮಾಡಲಿ? ಎಲ್ಲರೂ ಉದ್ರಿ ಹೇಳೀ ಹೋಗ್ತಾವರೆ."

ಕತೆ ಆವ್ಮೇಲೆ ಕಟ್ಟುವೆಯಂತೆ. ಈ ಆಟಾನೆಲ್ಲಾ ನಮ್ಮತ್ತಾವ ಬಿಟ್ಟು ಬಿಡು ಗೊತ್ತಾ? ಮೊದಲು ಮಾಮೂಲು ಮಡುಗು. ದಫೆದಾರರು ಯಾಕೋ ಗರಂ ಆಗವರೆ"

"ಸುಳ್ಳು ಹೇಳಾಕಿಲ್ಲ ಕೇಸಣ್ಣ ದೇವರ ಮ್ಯಾಗೆ ಆಣೆ, ಕಾಸಿಲ್ಲ"

"ಹಾಗೋ"

ಮೇಲೆದ್ದ ಕೇಶವ ಅವಳನ್ನು ಹಿಡಿದುಕೊಳ್ಳಲು ಹೋದ. ಹಿಂದಕ್ಕೆ ಸರಿದ ಪುಟ್ಟಿ ಮೂಲೆಯಲ್ಲಿದ್ದ ಬರಲನ್ನು ಕೈಗೆ ತೆಗೆದುಕೊಂಡು ಹೇಳಿದಳು.

ಮೈ ಮುಟ್ಟಾಕೆ ಬಂದರೆ ಹುಚ್ಚು ಬಿಡಿಸ್ತೀನಿ ಗೊತ್ತಾ? ಮೊದಲು ಮಾರ್ಯ್ಯಾದೆಯಿಂದ ಹೊರಗೆ ಹೋಗು"

ಥೂ ಎಂದು ಉಗುಳಿದ ಕೇಶವ ಪುಟ್ಟಿಯ ಗುಡಿಸಲಿನಿಂದ ಹೊರ ಬಂದ. ಅವನಿಗೆ ಎಂದೂ ಆಗದ ಪರಾಭವವಾಗಿತ್ತು ಅಪಮಾನ ದಿಂದ ಕುದಿದು ಹೋದ. ಸ್ಟೇಷನ್‌ಗೆ ಹೋದವನೆ ಸಂಗತಿಯನ್ನು ಒಂದಕ್ಕೆ ಎರಡು ಮಾಡಿ ದಫೆದಾರ್ ವೆಂಕಟಪ್ಪನಿಗೆ ಹೇಳಿದ.

"ಹಾಗೆ ಹೇಳಿದಳೇನು ಬೇವಾರ್ಸಿ...."

"ಹೌದು ಸಾರ್ ಯಾವನಿಗೆ ಬೇಕೋ ಮಾಮೂಲು ? ದಫೆದಾರ ನಂತೆ ದಫೆದಾರ ! ಯಾವನೋ ಅವನು ಬೋಸುಡಿಮಗ ಬರಲಿ....ಅಂದಳು"

"ಸಾಕು ನಿಲ್ಲಿಸು" ಬೂಡ್ಸನ್ನು ನೆಲಕ್ಕೆ ಜಾಡಿಸಿದ ವೆಂಕಟಪ್ಪ ಕಾನ್ ಸ್ಟೇಬಲ್ ರಾಮಯ್ಯನಿಗೆ ಹೇಳಿದ.

"ಕೇಳಿದೆಯಾ ರಾಮಯ್ಯ. ನಾಳೆ ಆ ಶನಿಮುಂಡೆಯ ಹಟ್ಟಿ ಮೇಲೆ ಧಾಳಿ ಮಾಡೋಣ"

"ಸರಿ ಸಾರ್"

ಗೊತ್ತು ಮಾಡಿಕೊಂಡಿದ್ದಂತೆಯೇ ಒಂದು ದಿನ ದಾಳಿ ನಡೆಸಿ ಕಳ್ಳ ಬಟ್ಟಿಯ ತಯಾರಿಕಾ ಉಪಕರಣಗಳೊಂದಿಗೆ ಪುಟ್ಟಿಯನ್ನು ಅವಳ ಅವ್ವನನ್ನು ಹಿಡಿದುಕೊಂಡು ಸ್ಟೇಷನ್ನಿಗೆ ಬಂದರು.

"ಏನಂತಿಯಾ ಈಗ?'

"ನಾನೇನು ಹೇಳಲಿ ಬುದ್ಧಿ ?"

ನಮ್ಮ ಹತ್ತಿರ ಆಟ ಆಡ್ತೀಯಾ. ದಫೇದಾರ್ರು ವೆಂಕಟಪ್ಪ ಅಂದ್ರೆ ಯಾರು ? ಗೊತ್ತಾಯಿತಾ ?"

ದುರುಗುಟ್ಟಿಕೊಂಡು ಅವಳನ್ನೇ ನೋಡಿದ ವೆಂಕಟಪ್ಪ. ಭಯದಿಂದ ಪುಟ್ಟಿ ಏದುಸಿರು ಬಿಡುತ್ತಿದ್ದಳು. ಅವಳ ಉಬ್ಬಿದ್ದ ಎದೆ ಅವನ ಕಣ್ಣು ತಿವಿದಂತೆ ಆಯಿತು. ಪುಟ್ಟಿ ಕಟ್ಟುಮಸ್ತಾದ ಹೆಂಗಸು. ಮುದುಡಿಕೊಂಡಿದ್ದ ಕಾಮನೆಗಳು ವೆಂಕಟಪ್ಪನ ಮೈಯಲ್ಲಿ ಮತ್ತೆ ತಲೆ ಕೆದರಿಕೊಂಡವು. ಹೆಂಡತಿ ರಾಜಮ್ಮ ಊರಿಗೆ ಹೋಗಿ ಹದಿನೈದು ದಿನವಾಗಿತ್ತು.

ಹೊರಗೆ ಬಂದ ವೆಂಕಟಪ್ಪ ಬೀಡಿ ಎಳೆಯುತ್ತಾ ಕುಳಿತಿದ್ದ ಸೈಯದ್ ಕಿವಿಯಲ್ಲಿ ಏನೋ ಹೇಳಿದ. ಅವನ ಮಾತು ಕೇಳಿ ತಲೆ ದೂಗಿದ ಸಾಬಿ ಒಳಗೆ ಬಂದು ಪುಟ್ಟಿಗೆ ಹೇಳಿದ.

"ದಫೇದಾರ್ರು ಮನಸ್ಸು ಮಾಡಿದರೆ ನಿನ್ನ ಬಿಡಬಹುದು. ಇಲ್ಲದೇ ಹೋದರೆ ಆರು ತಿಂಗಳು ಜೈಲಿನಲ್ಲಿ ಕುಂತ್ಕೋಬೇಕು. ಅವರು ನಿನ್ನ ತಾವ ಏನಾದರೂ ಕೇಳಿದರೆ ಮಾತಾಡದೆ ಕೊಟ್ಟು ಬಿಡು."

"ನನ್ನ ತಾವಾ ಏನೈತಣ್ಣ ?"

"ಏನೈತೆ ? ಗಿಣಿ ಹಂಗೆ ಮಾತನಾಡ್ತೀಯಲ್ಲ ! ವ್ಯಂಗ್ಯವಾಗಿ ನಕ್ಕ ಸಾಬಿ ಹೊರಹೋದ.

ತನ್ನ ಹತ್ತಿರವೇ ಬಂದು ನಿಂತ ವೆಂಕಟಪ್ಪನನ್ನು ನೋಡಿದ ಪುಟ್ಟಿ ಹಿಂದಕ್ಕೆ ಸರಿದಳು. ಅವಳ ಕೈ ಹಿಡಿದು ತನ್ನತ್ತ ಎಳೆದುಕೊಳ್ಳಲು ವೆಂಕಟಪ್ಪ ಬಾಗಿದ.

'ದಮ್ಮಯ್ಯ ! ನಿಮ್ಮ ಕಾಲಿಗೆ ಬೀಳ್ತೀನಿ ಬೇಡ ಕಣಪ್ಪ"

"ಮತ್ತೆ ಮಾತನಾಡಿದರೆ ಚರ್ಮ ಸುಲಿದುಬಿಡ್ತೀನಿ'

'ದಮ್ಮಯ್ಯ........'

ಅವಳು ಮುಂದೆ ಮಾತಾಡುವಷ್ಟರಲ್ಲಿಯೇ ವೆಂಕಟಪ್ಪ ಅವಳ ಸೆರಗನ್ನು ಜಾರಿಸಿದ್ದ. ಪುಟ್ಟಿ ಕೊಸರಿಕೊಳ್ಳಲು ಮಾಡಿದ ಪ್ರಯತ್ನ ವಿಫಲವಾಗಿತ್ತು. ಅಸಹಾಯಕಳಾಗಿ ಅವಳು ದೊಪ್ಪೆಂದು ಕೆಳಗೆ ಬಿದ್ದಳು. ಹೊರಗೆ ನಿಂತಿದ್ದ ಸಾಬಿ ಕಿಸ್ಸನೆ ನಕ್ಕು ಬಾಗಿಲು ಎಳೆದುಕೊಂಡ. ಸ್ವಲ್ಪ ಹೊತ್ತು ಕಳೆದಿರ ಬಹುದು, ವೆಂಕಟಪ್ಪ ಬೀಡಿ ಹಚ್ಚಿಕೊಳ್ಳುತ್ತಾ ಹೊರಬಿದ್ದ. ಕಾನ್‌ಸ್ಟೇಲ್ ಸೈಯದ್ ಒಳತೂರಿದ. ಅವನಾದ ಮೇಲೆ ರಾಮಯ್ಯ....ಅವನ ಹಿಂದೆ ಕೇಶವ....ಒಬ್ಬರಾದ ಮೇಲೆ ಒಬ್ಬರು—

ಪುಟ್ಟಿಗೆ ಎಚ್ಚರವಾದಾಗ ಬೆಳಕು ಹರಿಯತೊಡಗಿತ್ತು. ಛಳಿ ಅವಳ ಬೆತ್ತಲೆ ಮೈಯನ್ನು ಕೊರೆಯಲು ಪ್ರಾರಂಭಿಸಿತ್ತು. ಹೇಳಲಾರದಷ್ಟು ವೇದನೆ. ಸೀರೆಗಾಗಿ ತಡಕಾಡಿದಳು. ಅವಳು ಎದ್ದುದನ್ನು ಕಂಡ ಕೇಶವ ಸೀರೆಯನ್ನು ಅವಳ ಮುಖದ ಮೇಲೆ ಎಸೆದು ಹೇಳಿದ. "ಇಲ್ಲಿಂದ ಇನ್ನೊಂದು ನಿಮಿಷದಲ್ಲಿ ತೊಲಗಿ ಹೋಗಬೇಕು.

ಅವನನ್ನೊಮ್ಮೆ ದುರುಗುಟ್ಟಿಕೊಂಡು ನೋಡಿದ ಪುಟ್ಟಿ ಸೀರೆ ಸುತ್ತಿ ಕೊಂಡು ಸ್ಟೇಷನ್ನಿನಿಂದ ಹೊರಹೊರಟಳು.

ಸಂಜೆಯ ಸಮಯ, ವಾರದ ರಿಪೋರ್ಟ್ ಬರೆಯುತ್ತಾ ಕುಳಿತಿದ್ದ ವೆಂಕಟಪ್ಪ. ರಾಮಯ್ಯ ಬಂದವನೇ ಏದುಸಿರು ಬಿಡುತ್ತಾ ಹೇಳಿದ :

"ಸಾರ್, ಪುಟ್ಟಿ ಅಯ್ಯನಕೆರೆಗೆ ಬಿದ್ದು ಹೋಗವಳೆ"

"ಯಾವಾಗ ?"

"ಬೆಳಗ್ಗೆನೆ ಇರಬೇಕು. ಚೆನ್ನಾಗಿ ನೀರು ಕುಡಿದಿದ್ದಾಳೆ. ಮೈಯೆಲ್ಲಾ ಬಾತು ಕೊಂಡಿದೆ"

'ಹಾಳಾಗಲಿ ನಡಿ. ಮಹಜರ್ ಮಾಡಿ ಬರೋಣ."

ಊರಜನರ ಮುಂದೆ ಮಹಜರ್ ಮಾಡಿ ಪುಟ್ಟಿ ಆತ್ಮಹತ್ಯೆಗೆ ಅವಳ ಕಳ್ಳ ಭಟ್ಟಿಯ ವ್ಯವಹಾರವೇ ಕಾರಣವಾಗಿರಬಹುದು ಎಂದು ಬರೆದ. ಅದಕ್ಕೆ ಪಟೇಲನ ಆದಿಯಾಗಿ ಹಲವರ ರುಜು ತೆಗೆದುಕೊಂಡ.

ಅದಾಗಿ ತಿಂಗಳೆರಡು ಮಾತ್ರ ಕಳೆದಿದ್ದವು. ಅಷ್ಟರಲ್ಲಿಯೇ ಪುಟ್ಟಿ ದೆವ್ವವಾಗಿ ಕಿರುಕುಳ ಕೊಡಲು ಪ್ರಾರಂಭಿಸಿದಳೇ....?

....ಕಳೆದ ಘಟನೆ ನೆನೆದು ತತ್ತರಿಸಿದ. ಮಲಗಿದವನು ನಡುಗಿದ.

"ಯಾಕೆ ನಿದ್ರೆ ಬರಲಿಲ್ಲವೆ ?"

"ಇಲ್ಲಾ ರಾಜಿ."

"ನಿಟ್ಟುಸಿರು ಬಿಡುತ್ತಿದ್ದೀರಿ ? ನಿಮಗೂ ಭಯವೇ."

"ಭಯ ! ಅದೂ ದಫೇದಾರ ವೆಂಕಟಪ್ಪನಿಗೆ. ಉಜ್ರೆಯಲ್ಲಿ ನನ್ನ ಹೆಸರು ಹೇಳಿದವನಿಗೂ ಭಯವಿಲ್ಲ"

ಹೆಂಡತಿಗೇನೋ ಹಾಗೆ ಹೇಳಿದ.

ಅವನ ಎದೆ ಭಯದಿಂದ ತಲ್ಲಣಗೊಂಡಿತ್ತು. ದೆವ್ವದ ದೆಸೆಯಿಂದ ಮುಂದೇನು ಕಾದಿದೆಯೋ ಎಂದು ಚಿಂತಿಸಿದ

ಹೊರಗಡೆ ಮಲಗಿದ್ದ ಕೇಶವನಿಗಾಗಲಿ ರಾಮಯ್ಯನಿಗಾಗಲಿ ನಿದ್ದೆಯೇ ಇಲ್ಲ. ಇಬ್ಬರೂ ಹೊರಳಾಡತೊಡಗಿದರು. ರಾಮಯ್ಯ ಒಮ್ಮೆಯೇ ರೇಗಿದ.

"ಸರಿಯಾಗಿ ಮಲಗೋ....ಮಕ್ಕಳ ಹಾಗೆ ಒದೀತೀಯಲ್ಲೋ...."

"ಯಾರೋ ಒದ್ದಿದ್ದು ? ಕಾಲನ್ನು ಎಷ್ಟು ದೂರದಲ್ಲಿ ಇಟ್ಟು ಕೊಂಡಿದ್ದೀನಿ." ಒಂದು ಘಳಿಗೆ ಇಬ್ಬರೂ ಸುಮ್ಮನಿದ್ದರು.

"ನಾ ನಿನ್ನ ಮುಟ್ಟೇಯಿಲ್ಲ, ಯಾಕ ಲೋ ಒದಿತೀಯಾ ?" ಕೇಶವ ಸಿಡುಕಿದ. ಆತನ ಮಾತನ್ನು ಕೇಳಿದ ರಾಮಯ್ಯ ತಿರುಗಿದ, ಅಷ್ಟರಲ್ಲಿಯೇ ಅವನ ಬೆನ್ನಿಗೊಂದು ಬಲವಾಗಿ ಏಟು. ಎದ್ದು ಕೂರಲುಹೋದ ಕೇಶವನ ಕೆನ್ನೆಗೆ ಪಟೇರ್ ಎಂದು ಬಿದ್ದಿತ್ತು. ಏಟಿನ ಶಬ್ದ ಸ್ಪಷ್ಟವಾಗಿತ್ತು. ಆ ಏಟಿಗೆ ಕೇಶವ ಅದುರಿದ.

ಸರ್ರನೆ ಯಾರೋ ಜಗುಲಿಯ ಮೆಟ್ಟಿಲು ಧುಮುಕಿ ಓಡಿದ ಹಾಗೆ, ಸಣ್ಣಗೆ ಗೆಜ್ಜೆಯ ಶಬ್ಧ. ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡರು ಎದ್ದು ಕುಳಿತ ಕೇಶವ ರಾಮಯ್ಯನತ್ತ ಸರಿದು ಕುಳಿತ. ಅವನ ಮುಖ ವೆಲ್ಲಾ ಭಯದಿಂದ ಬಿಳಿಚಿಕೊಂಡಿತ್ತು.

ಸ್ಟೇಷನ್‌ನಲ್ಲಿ ಮಲಗಿದ್ದ ಸೈಯ್ಯದ್ ನಕ್ಕ !

ಅಯ್ಯೋ ಕೈ ನುಲಿಚಬೇಡಾ ಪುಟ್ಟ.... ನಿದ್ದೆಯ ಮಂಪರಿನಿಂದ ಎಚ್ಚೆತ್ತ ಸೈಯ್ಯದ್ ಕಣ್ಣುಬಿಟ್ಟು ಸುತ್ತಲೂ ನೋಡಿದ. ಯಾರೂ ಇಲ್ಲ.

ಆದರೆ ಬಲಗೈಯ ಕೀಲಿ ತಪ್ಪಿದಂತೆ ಆಯಿತು. ಅವನಿಗೆ ತನ್ನ ಮೊಣಕೈಯನ್ನೇ ಯಾರೋ ಹಿಂದು ಮುಂದೆ ಮಾಡಿ ತಿರುಗಿಸಿದಂತೆ ಕಂಡಿತು. ಎದ್ದು ಕೂರಲು ಹೋದ. ಪಟೀರ್ ಎಂದು ಮುಖದ ಮೇಲೊಂದು ಪೆಟ್ಟು. ಬಾಯಿಂದ ರಕ್ತ ಬರತೊಡಗಿತು! ಸುತ್ತಲೂ ನೋಡಿದ, ಯಾರು ಇಲ್ಲ. ದೊಣ್ಣೆಗೆ ತಡಕಾಡಿದ. ಯಾರೋ ಗೋಡೆ ಜಿಗಿದು ಓಡಿದ ಹಾಗೆ ಆಯಿತು. ಗೆಜ್ಜೆಯ ಸದ್ದು ಸ್ಪಷ್ಟವಾಗಿತ್ತು.

ಮಧ್ಯಾಹ್ನ ಸ್ಟೇಷನ್‌ನಲ್ಲಿ ಕುಳಿತ ವೆಂಕಟಪ್ಪನಿಗೆ; ಸೈಯ್ಯದ್ ಕೇಶವ ರಾಮಯ್ಯ ತಾವು ಪಡೆದ ಅನುಭವಗಳನ್ನು ವರ್ಣಿಸಿದರು. ಅದನ್ನೆಲ್ಲಾ ಕೇಳಿದ ವೆಂಕಟಪ್ಪ ಗಡಗಡನೆ ನಡುಗಿದ. ಪುಟ್ಟಿಯ ದೆವ್ವ ಸಾಮಾನ್ಯದಲ್ಲ ತಮ್ಮನ್ನು ಬಿಡುವುದಿಲ್ಲ ಎಂದುಕೊಂಡ.

"ಪುಟ್ಟಿ ದೆವ್ವ ಆಗಿರಬೇಕು ಅಂತೀರಿ"

"ಹೌದು ಸ್ವಾಮಿ. ಇದು ದೆವ್ವದ ಕಾಟವೇ ಸರಿ" ಕೇಶವ ಲೊಟ ಗುಟ್ಟಿದ.

'ಇದಕ್ಕೆ ಏನು ಮಾಡೋದು ರಾಮಯ್ಯ'

ಏನು ಮಾಡೋದು ದಫೇದಾರ್ರೇ ಏನೋ ಹೊಳೆಯೋದಿಲ್ಲ ಇಷ್ಟು ಮಾಡಬಹುದು. ಕಾರ್ಕಳದಲ್ಲಿ ಮಂತ್ರ ಮಾಟಮಾಡೋ ಶಾಸ್ತ್ರಿ ಅವರ. ಅವರ ಕೈಯಲ್ಲಿ ಇದನ್ನು ಹಿಡಿಸಬೇಕು"

"ಕೇಶವ ನೀನು ಹೋಗಿ ಆ ಶಾಸ್ತ್ರಿಗಳನ್ನು ಕರೆದುಕೊಂಡು ಸಾಯಂಕಾಲದೊಳಗೆ ಬಾ ರಾಮಯ್ಯ."

"ಆಗಲಿ ಸಾರ್."

"ನೀನು ಮನೆಹತ್ತಿರಾನೆಇರು: ಸೈಯದ್. ಡೈಲಿ ರಿಪೋರ್ಟ್ ಬರೆದು ಬಂದು ಬಿಡ್ತೀನಿ. ಅವಳು ಒಬ್ಬಳೇ ಇರೋದಕ್ಕೆ ಹೆದರಿ ಕೊಳ್ಳುತ್ತಾಳೆ"

"ಸರಿ ಸಾರ್."

ಕಾನ್‌ಸ್ಟೇಬಲ್‌ಗಳು ಹೊರಹೋದಮೇಲೆ ಡೈಲಿ ರಿಪೋರ್ಟ್ ಬರೆಯಲು ಕಾಗದ ತೆಗೆದುಕೊಂಡ ಪೆನ್ನಿಗೆ ಹುಡುಕಾಡಿದ ಕಾಗದವನ್ನು ಯಾರೋ ಫಕ್ಕನೆ ಕಿತ್ತುಕೊಂಡಂತೆ ಆಯಿತು ಭಯದಿಂದ ನೀರಾಗಿ

ಹೋದ. ಕೈಕಾಲಿನಲ್ಲಿ ತ್ರಾಣ ಸಾಲದೆ ಕುಸಿಯುವಂತೆ ಆಯಿತು. ಮನೆ ಯತ್ತ ಓಡಲು ನಿಶ್ಚಯಿಸಿ ಎರಡು ಹೆಜ್ಜೆ ಮುಂದಿಡಲು....ಹಾಗೆ ಇಟ್ಟನೋ ಇಲ್ಲವೋ ಹಿಂದಿನಿಂದ ಅಂಗಿಯ ಕಾಲರನ್ನು ಹಿಡಿದು ಜಗ್ಗಿದಂತಾಯಿತು. ಹಿಂದಕ್ಕೆ ತಿರುಗಿ ನೋಡಿದ ಎದೆಗೆ ಬಲವಾದ ಹೊಡೆತ. ಕಣ್ಣಿಗೆ ಕತ್ತಲೆ ಕವಿಯ ತೊಡಗಿತು. ಕಿಟಾರನೆ ಕಿರುಚಿ ಕೆಳಗೆ ಬಿದ್ದ.

ಮಾತನಾಡುತ್ತಾ ಹೊರಗೆ ಹೊರಟಿದ್ದ ಕೇಶವ, ರಾಮಯ್ಯ, ಸೈಯದ್ ಇವರು ದಫೇದಾರ್ ವೆಂಕಟಪ್ಪ ಕಿರುಚಿಕೊಂಡಿದ್ದು ಕೇಳಿ ಮತ್ತೆ ಸ್ಟೇಷನ್ನಿಗೆ ಓಡಿಬಂದು ಒಳಬಂದು ನೋಡುತ್ತಾರೆ. ವೆಂಕಟಪ್ಪ, ಹಿಂದೆ ಪುಟ್ಟ ಬಿದ್ದಿದ್ದ ಸ್ಥಳದಲ್ಲಿಯೇ ರಕ್ತ ಕಾರಿಕೊಂಡು ಬಿದ್ದಿದ್ದಾನೆ.

ತಲೆಯ ಮೇಲಿದ್ದ ಟೊಪ್ಪಿಗೆಗಳನ್ನು ಮೂವರೂ ತೆಗೆದು ತಲೆ ತಗ್ಗಿಸಿ ನಿಂತರು.

# ಸಪ್ತಸ್ವರ

"ಕೂತಿದ್ದವರೆಲ್ಲಾ ಭಯದಿಂದ ನೀರಾಗಿದ್ದಾರೆ. ಮೊದಲೇ .ರುದ್ರಮ್ಮ, ಕಾಲು ಕುಟ್ಟಿದರೆ ಮತ್ತೇನಾಗುತ್ತದೋ? ;ಎಲ್ಲರ ಬಾಯಿಯ ದ್ರವವು ಆರಿ ಹೋಗಿದೆ. ಬೊಂಬೆಗಳಂತೆ ಅಲುಗಾಡದೆ ಇದ್ದಾರೆ. ಪೂಜಾರಯ್ಯ ಬಿರುಸಿನಿಂದ ಅಮ್ಮನ ಕಾಲಿಗೆ ಪೆಟ್ಟು ಹಾಕುತ್ತಿದ್ದಾನೆ! ಏನಿದು ? ಎಲಾ! ಹೌದು. ಕೇಳುತ್ತಿರುವುದು ಕಲ್ಲಿನ ಶಬ್ದವಲ್ಲ! ಅದಾವುದೋ ವಾದ್ಯದ ಧ್ವನಿಯಂತಿದೆ! ಪೂಜಾರಯ್ಯ ಕುಟ್ಟುತ್ತಲೇ ಇದ್ದಾನೆ. "ಹೋ" ಕಲ್ಲಿನಲ್ಲಿ ಸ್ವರ ಬರುತ್ತಿದೆ!—— ಸಪ್ತಸ್ವರ"..

# ೯

ಸೂರ್ಯ ಬಾನಂಗಣಕ್ಕೆ ಬಂದು ಅಷ್ಟೇನೂ ಹೊತ್ತಾಗಿಲ್ಲ. ಪಕ್ಷಿಗಳ ಕಲರವದೊಂದಿಗೆ ಕಲ್ಯಾಣಪುರ ಸಂಪೂರ್ಣ ಎಚ್ಚರಗೊಂಡು ಕಾರ್ಯಮಗ್ನ ವಾಗಿದೆ. ಬೀದಿಯನ್ನೆಲ್ಲಾ ಗುಡಿಸಿ ಚೊಕ್ಕಟಮಾಡುತ್ತಿದಾರೆ ಜವ್ವನೆಯರು. ಗುಂಡಿ ತೋಡಿ, ಬೊಂಬುನೆಟ್ಟು ಹಸಿರುತೋರಣ ಕಟ್ಟುತ್ತಿದ್ದಾರೆ ಯುವಕರು. ಏನೂ ತೋಚದೆ ಅತ್ತಿಂದಿತ್ತ ಸಲಹೆಕೊಡುತ್ತಾ ಅಡ್ಡಾಡುತ್ತಿದ್ದಾರೆ ಪ್ರಾಯಸಂದವರು. ಬಾಲಕರು ಸೊಪ್ಪು ಸೆದೆಗಳನ್ನು ಗುಡ್ಡೆಮಾಡಿ ಒಟ್ಟು ತ್ತಿದ್ದಾರೆ. ಉತ್ಸಾಹವೋ ಉತ್ಸಾಹ ! ಕೂಗೋ ಕೂಗು ! ಗದ್ದಲವೋ ಗದ್ದಲ !

ಪೂಜಾರಯ್ಯ ನಡುಬಿಗಿದು ಗುಡಿಯ ಶೃಂಗಾರದತ್ತ ಲಕ್ಷ್ಯಕೊಟ್ಟಿ ದ್ದಾನೆ. ಎಲ್ಲೂ ಜಡತೆಯಿಲ್ಲ. ಎಲ್ಲವೂ ರಭಸದಿಂದ ಸಾಗತೊಡಗಿದೆ.

ಇಂದು, ಕಲ್ಯಾಣಪುರದ ಗುಡಿಯ 'ಅಮ್ಮ'ನ ಉತ್ಸವ. ಪ್ರತಿ ವರುಷವೂ ಇದೇ ಸುಮಾರಿಗೆ ಆಗುವುದು. ಈ ಮೂರು ದಿನಗಳು ಕಲ್ಯಾಣ ಪುರದ ಇತಿಹಾಸದಲ್ಲಿ ಗಮನೀಯವಾಗಿದೆ, ಅನೇಕ ಕಾರಣಗಳಿಂದ. ಗದ್ದೆ ಗಳಲ್ಲಿ ಹಸಿರು ಮಾಗತೊಡಗಿ ತೆನೆ ತುಂಬಿ ಭಾರವಾಗಿ ಭೂಮಿಯತ್ತ ಬಾಗಿ ರುತ್ತವೆ. ಹಕ್ಕಿಗಳು ಆನಂದದಿಂದ ರಭಸದಿಂದ ರೆಕ್ಕೆ ಬಡಿಯುತ್ತಾ ಗದ್ದೆಯಲ್ಲೆಲ್ಲಾ ರಿಂಗಣವಾಡುತ್ತವೆ. ಕಣ ಮಾಡುವ ಮುನ್ನ 'ಅಮ್ಮ'ನ ಪೂಜೆ ಈ ಊರಿನಲ್ಲಿ ಆಗಬೇಕು. ರೋಗಗಳಿಂದ ಮುಕ್ತವಾಗಿರಿಸಲು ಊರವರೆಲ್ಲಾ ಬೇಡಿಕೊಳ್ಳುತ್ತಾರೆ, ಈ ಅಮ್ಮನನ್ನು.

ಒಮ್ಮೆ ಗ್ರಾಮದ ಕಲಹದಿಂದಾಗಿ ಪೂಜೆ ನಡೆಯಲಿಲ್ಲ. ಊರಿನಲ್ಲಿ ಒಮ್ಮೆಲೆ ಸಿಡುಬು ಗಾಳಿಯಂತೆ ಹಬ್ಬತೊಡಗಿತು. ಮನೆ ಮನೆಗೂ ಸಾವಿನ ಇಣುಕು ನೋಟ ! ಏನೋ, ಎಂತೋ ಊರಿನವರೆಲ್ಲಾ ಒಮ್ಮೆಲೆ ಅಮ್ಮನ

ಮುಂದೆ ಅಡ್ಡಬಿದ್ದರು. ಹಬ್ಬಿದ್ದ ರೋಗ ನಿಧಾನವಾಗಿ ಇಳಿಯ ತೊಡಗಿತು. ಮತ್ತೊಮ್ಮೆ ಪೂಜೆ ಉಪೇಕ್ಷಿಸಿದ್ದಕ್ಕೆ ಕಣದಲ್ಲಿ ಒಟ್ಟಿದ್ದ ಹುಲ್ಲಿನ ಮೆದೆಗಳು ಹತ್ತಿ ಉರಿದುವಂತೆ.

ಊರಿನವರಿಗೆ ಅಮ್ಮನನ್ನು ಕಂಡರೆ ವಿಚಿತ್ರ ರೀತಿಯ ಭಯ, ಅದಕ್ಕೂ ಮಿಗಿಲಾಗಿ ಭಕ್ತಿ. ಅಂದಿನಿಂದ, ತೆನೆಗೆ ಕುಡುಗೋಲು ಒಯ್ಯುವ ಮುನ್ನವೇ ಮೂರು ದಿನ ಈ ಅಮ್ಮನ ಉತ್ಸವ. ಆಮೇಲೆ ಮುಂದಿನ ಮಾತು ದ್ವೇಷ ಅಸೂಯೆಗಳು ಎಷ್ಟೇ ಇದ್ದರೂ ಪೂಜಾ ಉತ್ಸವದಲ್ಲಿ ಎಲ್ಲರೂ ಬೆರೆಯುತ್ತಾರೆ. ಭಾಗಿಯಾಗುತ್ತಾರೆ.

ಈ ಉತ್ಸವಕ್ಕೆ ಮತ್ತೊಂದು ಐತಿಹಾಸಿಕ ಘಟನೆ ಒದಗಿ, ಉತ್ಸವ ಮತ್ತೂ ಕಳೆಗೂಡುವಂತಾಗಿದೆ. ಅದು ಪೂಜಾರಯ್ಯನ ಮನೆತನದ ಸಂಗತಿ.

ಪೂಜಾರಯ್ಯನ ಅಜ್ಜ ರಾಮಯ್ಯ ಒಮ್ಮೆ ಹೊಟ್ಟೆಯಪಾಡಿಗಾಗಿ ಈ ಊರಿನತ್ತ ಬಂದರಂತೆ. ಆಗ ಯಾವದೋ ಕಲಹದಿಂದಾಗಿ ಅಮ್ಮನ ಉತ್ಸವ ನಡೆದಿರಲಿಲ್ಲ. ಒಮ್ಮಿಂದೊಮ್ಮೆಯೇ ನದಿಯ ನೀರು ಬತ್ತತೊಡಗಿ, ಊರಿನವರೆಲ್ಲಾ ಕಂಗಾಲಾಗಿ ದಿಗಂತದತ್ತ ನೋಡತೊಡಗಿದರು. ಭಿಕ್ಷಾಟನೆಗಾಗಿ ಬಂದಿದ್ದ ರಾಮಯ್ಯ ಸುದ್ದಿ ಕೇಳಿ ಗಂಗೆಗೆ ಪೂಜೆ ಮಾಡಿ ಹಾಡತೊಡಗಿದನಂತೆ. ಎರಡು ದಿನಗಳಲ್ಲೇ ನದಿಯ ನೀರು ಮಾಮೂಲು ಮಟ್ಟಕ್ಕೆ ಹರಿಯತೊಡಗಿದ್ದನ್ನು ಕಂಡು ಗ್ರಾಮದವರೆಲ್ಲಾ ರಾಮಯ್ಯನಿಗೆ ಅಡ್ಡಬಿದ್ದು ಗ್ರಾಮದಲ್ಲಿಯೇ ನೆಲೆಸಲು ಕೇಳಿಕೊಂಡರಂತೆ. ಅವರ ಒತ್ತಾಸೆಗೆ, ರಾಮಯ್ಯ, ಆ ಊರಿನಲ್ಲಿಯೇ ನೆಲಸಿ, ಆ ಊರಿನದೇ ಹೆಣ್ಣನ್ನು ಮದುವೆಯಾದನೆಂದು ಪ್ರತೀತಿ.

ಅಂದಿನಿಂದ ಅಮ್ಮನ ಉತ್ಸವದ ಅಂಗವಾಗಿ ಸಂಗೀತ ಹಾಡುವ ಸಂಪ್ರದಾಯ ಬೆಳೆದು ಬಂದಿತು. ಕಾಲಕ್ರಮದಲ್ಲಿ ರಾಮಯ್ಯನ ಮಗ ಸುಕುಮಾರಯ್ಯ ತಂದೆಯಂತೆ ಗಾಯನ ಕಲೆಯನ್ನು ಬೆಳೆಸಿಕೊಂಡು ಅಮ್ಮನನ್ನು, ಗ್ರಾಮದವರನ್ನು ತಣಿಸಿದ್ದಾನೆ. ಗಾಯನದಲ್ಲಿ ಅಪ್ಪ ಅಜ್ಜನನ್ನು ಮೀರಿಸಿ ಸಿದ್ಧಿಪಡೆದವನು ಎಂದರೆ ಪೂಜಾರಯ್ಯ. ಕಿರಿಯ ವಯಸ್ಸಿನಲ್ಲಿಯೇ ಅವನ ಪಾಂಡಿತ್ಯದ ಸುದ್ದಿ ಸುತ್ತಮುತ್ತಲಿನ ಗ್ರಾಮಕ್ಕೆಲ್ಲಾ ಹರ

ಡಿತ್ತು. ಅವರೆಲ್ಲಾ ಉತ್ಸವಕ್ಕೆ ಬಂದು ಭಾಗಿಗಳಾಗಿ, ಪೂಜಾರಯ್ಯನ ಗಾನ ಮಾಧುರ್ಯದಲ್ಲಿ ಮೀಯುತ್ತಾರೆ.

ಪೂಜಾರಯ್ಯನ ಖ್ಯಾತಿ ಕೇಳಿ ಬಂದವರಲ್ಲಿ ನರಸಿಂಹಯ್ಯನೂ ಒಬ್ಬ. ಆತನೂ ಅಷ್ಟೋ ಇಷ್ಟೋ ಸಂಗೀತ ಕಲಿತವನು. ನಿಲ್ಲಲು ನೆಲೆಯಿಲ್ಲದೆ ಊರಿಂದೂರಿಗೆ ಅಲೆಯುವುದೇ ಅವನ ಪರಿಪಾಠ. ಪೂಜಾರಯ್ಯನಂತೆ ತನಗೂ ಯಾರಾದರೂ ಸತ್ಕರಿಸಿಯಾರೇ ಪುರಸ್ಕರಿಸಿಯಾರೇ ಎಂದು ಚಿಂತಿಸುತ್ತಾನೆ. ಪೂಜಾರಯ್ಯ ಬದುಕಿರುವವರೆಗೂ ಅದು ಸಾಧ್ಯವಿಲ್ಲವೆಂದು ಆತ ಬಲ್ಲ.

ಅಮ್ಮನ ಗುಡಿಯ ಮುಂದೆ ದೊಡ್ಡದಾಗಿ ಚಪ್ಪರ ಹಾಕಿ, ಅದಕ್ಕೆ ಕಲ್ಪ ವೃಕ್ಷದ ಗರಿಗಳನ್ನು ಮುಚ್ಚಿದ್ದಾರೆ. ಚಪ್ಪರದ ಒಳಗಿನ ನೆಲವನ್ನೆಲ್ಲಾ ಸಾರಿಸಿ ಚಿತ್ರ ವಿಚಿತ್ರ ರಂಗವಲ್ಲಿ ಹಾಕಿದ್ದಾರೆ. ಊರ ಪ್ರಮುಖ ಮಾದಪ್ಪನೊಂದಿಗೆ. ಊರಿನ ಸಂಭ್ರಮ ಕಲಾಪಗಳನ್ನು ನೋಡಲು ಪೂಜಾರಯ್ಯ ಗ್ರಾಮದ ಬೀದಿಯನ್ನೆಲ್ಲ ಒಮ್ಮೆ ಸುತ್ತಿ ಬರುವುದು ವಾಡಿಕೆ. ಸಲಹೆ ಕೊಡಬೇಕಾದ ಕಡೆ ಸಲಹೆಕೊಟ್ಟು, ಅಮ್ಮನ ಉತ್ಸವದಲ್ಲಿ ಸ್ವಲ್ಪವೂ ಲೋಪವಾಗದಂತೆ ಎಚ್ಚರ ವಹಿಸುತ್ತಾರೆ.

ಗ್ರಾಮದ ಕಾರ್ಯ ಕಲಾಪಗಳನ್ನೆಲ್ಲಾ ವೀಕ್ಷಿಸಿಕೊಂಡು ಮನೆಯ ಮುಂದೆ ಬಂದಿದ್ದಾನೆ, ಪೂಜಾರಯ್ಯ. ನರಸಿಂಹಯ್ಯ, ನಿಂಬೆಹಣ್ಣು ಒಂದನ್ನು ಪೂಜಾರಯ್ಯನ ಮನೆಯತ್ತ ನಿವಾಳಿಸಿ ಎಸೆಯುತ್ತಿದ್ದಾನೆ. ಮೊದಲೆ ಸಿಡುಕಿನಂತಹ ಮುಖ. ಈಗ ಮತ್ತೂ ವ್ಯಾಘ್ರಗೊಂಡಿದೆ. ಕಬ್ಬಿಣದ ಮೊಳೆಯೊಂದನ್ನು ನೆಲಕ್ಕೆ ಬಡಿಯುತ್ತಿದ್ದಾನೆ. ಎಲೆಯೊಂದನ್ನು ಅಡ್ಡ ಉದ್ದವಾಗಿ ಹರಿದು, ಕುಂಕುಮ ;ಸವರಿ ಎಸೆಯುತ್ತಿದ್ದಾನೆ. ನಿಂತು ನೋಡುತ್ತಿದ್ದ ಪೂಜಾರಯ್ಯನಿಗೆ ಏನೂ ಅರ್ಥವಾಗದೆ ಕೇಳಿದ: "ಏನು ಮಾಡುತ್ತಿದ್ದೀರಿ ನರಸಿಂಹಯ್ಯನವರೇ ?" ಹ್ಞಾ ! ಒಮ್ಮೆಯೇ ಮಾತು ಕೇಳಿ ಬೆಚ್ಚಿ ಬಿದ್ದ ನರಸಿಂಹಯ್ಯ ಸಾವರಿಸಿಕೊಂಡು ಹೇಳಿದ : ಅಯ್ಯನವರಿಗೆ ದೃಷ್ಟಿ ತಾಕದೆ ಇರಲಿ ಅಂತ, ದೃಷ್ಟಿ ತೆಗೆದಿದ್ದೀನಿ. ಸಾವಿರಾರು ಜನ ಬರ್ತ್ತಾರೆ, ಹೋಗ್ತಾರೆ. ಸಮಯ ಒಂದೇ ಪಟ್ಟು ಇರಾಕಿಲ್ಲ, ಅದಕ್ಕೆ ದೃಷ್ಟಿ ತೆಗೆದೆ !"

ಭಕ್ತಿ ಯೊಂದಿಗೆ ಭಯ ಬೆರೆಸುತ್ತಾ ಹೇಳಿದ ನರಸಿಂಹಯ್ಯ.

"ಇದು ನಿಮ್ಮ ಭ್ರಮೆ ನರಸಿಂಹಯ್ಯನವರೇ, ಭ್ರಮೆ. ಆ ಅಮ್ಮ ಸೇವೆ ತಕ್ಕೋ ಬೇಕು ಅಂತಿದ್ದರೆ, ಹೇಗಾದರೂ ಮಾಡಿ ತಕ್ಕೊತ್ತಾಳೆ! ಹಾಗಿರುವಾಗ ಇಲ್ಲದ ಭ್ರಮೆ ಯಾಕೆ?"

ಹೇಗಾದರೂ ಇರಲಿ ಅಯ್ಯನವರೇ. ನಮ್ಮ ನಿಗಾದಲ್ಲಿ ನಾವು ಇರ ಬೇಕು ತಾನೇ ?"

"ಹೌದು !" ಗಂಭೀರವಾಗಿ ಪೂಜಾರಯ್ಯ ಉತ್ತರಿಸಿದ.

"ಅಯ್ಯನವರು ತಗೋಬೇಕು," ಕೈಯಲ್ಲಿದ್ದ ಕುಂಕುಮವನ್ನು ಪೂಜಾರಯ್ಯನ ಕೈಗಿತ್ತ. ಭಕ್ತಿಯಿಂದ ಸ್ವೀಕರಿಸಿದ ಪೂಜಾರಯ್ಯ ಅದನ್ನು ಹಣೆಗೆ ಹಚ್ಚಿಕೊಂಡ.

"ನಾನಿನ್ನು ಬರ್ಲಾ ಅಯ್ಯನೋರೆ !"

"ಒಳ್ಳೇದು. ಹೋಗಿ ಬನ್ನಿ !"

ನರಸಿಂಹಯ್ಯ ಹೋಗುವುದನ್ನು ನೋಡಿ ಪೂಜಾರಯ್ಯ ಇದಕ್ಕಿದ್ದ ಹಾಗೆಯೇ ನಕ್ಕು ಬಿಟ್ಟ. ಮತ್ತೆ ನಿಮಿಷಾರ್ಧದಲ್ಲಿ ಗಂಭೀರವಾಗಿ ಹಣೆಯ ಕುಂಕುಮ ಮುಟ್ಟಿ ನೋಡಿಕೊಂಡ. ವಿಚಿತ್ರ ತಳಮಳವಾಗತೊಡಗಿತ್ತು. ಯಾವುದೂ ಅರ್ಥವಾಗದೆ ಪೂಜಾರಯ್ಯ ನಿಂತೇ ಇದ್ದ.

"ಏನಿದು. ನಿಂತೆ ಬಿಟ್ಟಿರಲ್ಲ!! ಮೀಯೋದು ಯಾವಾಗ ? ಅಮ್ಮನ ಆರಾಧನೆ ಮಾಡೋದು ಯಾವಾಗ ?"

"ಅಹ್ಹಾ ! ಹೊರಟೆ !" ಮಡದಿಯ ಮಾತಿನಿಂದ ಎಚ್ಚರಗೊಂಡ ಪೂಜಾರಯ್ಯ ನದಿಯ ಕಡೆ ನಡೆದ.

ಸೂರ್ಯನ ಕಿರಣ ನದಿಯ ನೀರಿನ ಮೇಲೆ ನೇರವಾಗಿ ಬಿದ್ದಿದೆ. ದೂರದಿಂದ ನೋಡಿದರೆ ಗಾಜು ಹೊಳೆದಂತೆ ಹೊಳೆಯುತ್ತದೆ. ಅತ್ತ ಕಡೆ ಯಿಂದಲೇ ಮಂದವಾಗಿ ಗಾಳಿ ಬೀಸುತ್ತಿದೆ. ಗಂಡಸರು ಹೆಂಗಸರು ಎಂಬ ಭೇದ ವಿಲ್ಲ. ಎಲ್ಲರೂ ಮೀಯುತ್ತಿದ್ದಾರೆ. ಎಲ್ಲರಲ್ಲಿಯೂ ಎಣೆ ಕಾಣದ ಉತ್ಸಾಹ! ಮೀಯಲೆಂದು ಬಟ್ಟೆ ಬಿಚ್ಚಿಸಿಕೊಂಡ ಮಕ್ಕಳು ಹಾಗೆಯೇ ತಪ್ಪಿಸಿಕೊಂಡು ದಂಡೆಗೆ ಬಂದು ನದಿಯ ಮರಳಿನಲ್ಲಿ ಕಾಲು ಹುದುಗಿಸಿ

ಕೊಂಡು ಹಸಿ ಮಣ್ಣನ್ನು ಕಾಲ ಮೇಲೆಳೆದುಕೊಂಡು ತಟ್ಟಿ ತಟ್ಟಿ ಕಪ್ಪೆ ಗೂಡು ಕಟ್ಟುತ್ತಿದ್ದಾರೆ! ಕೈಯಿಂದ ತಪ್ಪಿಸಿಕೊಂಡು ಆಟದಲ್ಲಿ ಲೀನರಾದ ಹುಡುಗರನ್ನು ಹಿಡಿದುಕೊಂಡು ನೀರಿನಲ್ಲಿ ಮುಳುಗಿಸುತ್ತಿದ್ದಾರೆ ಹಿರಿಯರು. ಪೂಜಾರಯ್ಯ ಉಟ್ಟಿದ್ದ ಪಂಚೆಯನ್ನು ಒಗೆದು ಮರಳಿನ ಮೇಲೆ ಹರವಿ ನೀರಿಗಿಳಿದಿದ್ದಾನೆ. ಎರಡು ಮುಳುಗು ಹಾಕಿದ್ದಾನೆ.

"ಯಾಕೋ ನೀರು ರಾಡಿ ಆದಹಾಗೆ ಕಾಣ್ತಾ ಇವಲ್ಲ ಅಯ್ಯನೋರೆ." ಪಕ್ಕದಲ್ಲಿ ಹಣಗೆ ವಿಭೂತಿ ಬಳಿದುಕೊಳ್ಳುತ್ತಿದ್ದ ಶಂಭಯ್ಯ ಕೇಳುತ್ತಾನೆ.

"ಹೌದಾ ನಂಗೇನೂ ಗೊತ್ತಾಗೋದಿಲ್ಲವಲ್ಲ"

ಶಂಭಯ್ಯನ ಮಾತು ಕೇಳಿ ಪೂಜಾರಯ್ಯನಿಗೆ ಆಶ್ಚರ್ಯವಾಗಿದೆ. ಅಂತಲೇ ನೀರಿನತ್ತ ದೃಷ್ಟಿಸಿ ನೋಡಿದ. ಏನು ಕಾಣುವುದಿಲ್ಲ. ಮಾಮೂಲಿನಂತೆಯೇ ಹರಿಯುತ್ತಿದೆ.

"ಏನು ಅಜ್ಜಮ್ಮಾ, ನೀರು ರಾಡಿ ಆಗಿದೆಯಾ"

"ಹೌದು ಪೂಜಾರಪ್ಪ!"

ಪೂಜಾರಯ್ಯ ಮತ್ತೊಮ್ಮೆ ಹರಿಯುವ ನೀರನ್ನು ತದೇಕ ದೃಷ್ಟಿಯಿಂದ ನೋಡಿದ. ಇಲ್ಲ ಮಾಮೂಲುರೀತಿಯೇ ಹರಿಯುತ್ತಿರುವಂತೆ ಭಾಸವಾಗುತ್ತಿದೆ. ಏನೂ ಅರ್ಥವಾಗದೆ ಮತ್ತೊಮ್ಮೆ ಮುಳುಗು ಹಾಕಿ. ದಡದಲ್ಲಿ ಹರವಿದ್ದ ಪಂಚೆಯತ್ತ ಕೈ ಚಾಚಿದ.

ಚಪ್ಪರ ಚಿಕ್ಕದಾಯಿತೋ ಏನೋ? ಇಲ್ಲ, ಚಪ್ಪರ ಚಿಕ್ಕದಾಗಿಲ್ಲ! ಮಾಮೂಲಿಗಿಂತ ಎರಡು ಹರಿವೆ ಜಾಸ್ತಿಯೇ ಹಾಕಿದ್ದಾರೆ. ಬಂದಿದ್ದ ಜನ ಜಾಸ್ತಿ. ಚಪ್ಪರದಲ್ಲಿ ಜಾಗ ಸಾಲದೆ ಹೊರಗಡೆ ನಿಂತಿದ್ದಾರೆ.

ಮುಂಜಾನೆಯೇ ಅಮ್ಮನಿಗೆ ಅಭಿಷೇಕವಾಗಿದೆ. ಭಕ್ತಾದಿಗಳು ಹೊತ್ತಿದ್ದ ಹರಕೆ ಕಾಣಿಕೆಗಳನ್ನು ಸಲ್ಲಿಸಿಯಾಗಿದೆ. ತಳವಾರ ಚಿನ್ನಪ್ಪನ ಉಸ್ತುವಾರಿಯಲ್ಲಿ ಬಂದಿದ್ದವರಿಗೆಲ್ಲಾ ಸಂತರ್ಪಣೆ. ಉಳಿದಿದ್ದ ಕಾರ್ಯಕ್ರಮವೆಂದರೆ ಪೂಜಾರಯ್ಯನ ಸಂಗೀತ. ಸ್ವತಃ ಪೂಜಾರಯ್ಯನೇ ಅಮ್ಮನಿಗೆ ಮಂಗಳಾರತಿ ಮಾಡಿ ಎಲ್ಲರಿಗೂ ಹಂಚಿದ್ದಾನೆ ಎಂದಿಗಿಂತಲೂ ಮುಖ

ಗಂಭೀರವಾಗಿದೆ. ಕಟ್ಟಿದ್ದ ಜುಟ್ಟಿಗೆ ಬಿಲ್ವಪತ್ರೆಯ ಎಲೆ ಸಿಕ್ಕಿಸಿಕೊಂಡಿದ್ದಾನೆ. ಮನೆಯಲ್ಲಿ, ಬಂದವರಿಗೆಲ್ಲಾ ಬೇಲದ ಪಾನಕ ಮಾಡಿ ಹಂಚುತ್ತಿದ್ದಾಳೆ. ಪೂಜಾರಯ್ಯನ ಮಡದಿ.

ಚಪ್ಪರದಲ್ಲಿದ್ದವರಿಗೆಲ್ಲಾ ಮಂಗಳಾರತಿ ಕೊಟ್ಟು ಮುಗಿಸಿದ ಪೂಜಾರಯ್ಯ, ತಬಲದ ಹನುಮಪ್ಪನ ಬಳಿ ಬಂದು ಕುಳಿತ. ಹನುಮಪ್ಪನಿಗೆ ಪೂಜಾರಯ್ಯನಿಗೆ 'ಸಾಟಿ' ಕೊಡುವುದೆಂದರೆ ಎಲ್ಲಿಲ್ಲದ ಉತ್ಸಾಹ. ಆ ಸನ್ನಿವೇಶಕ್ಕಾಗಿಯೇ ಆತ ಕಾದು ಕುಳಿತಿರುವ ಮನುಷ್ಯ. ಪೂಜಾರಯ್ಯ ಪಕ್ಕದಲ್ಲಿ ಬಂದು ಕುಳಿತಿದ್ದನ್ನು ನೋಡಿ ತಬಲವನ್ನೊಮ್ಮೆ ಅಭಿಮಾನದಿಂದ ತಟ್ಟಿ ಕಲ್ಲಿನಲ್ಲಿ ಕುಟ್ಟಿಸರಿಮಾಡತೊಡಗಿದ.

ಹಣೆಯಲ್ಲಿ ಅಡ್ಡವಾಗಿ ವಿಭೂತಿ ಎಳೆದು ಮಧ್ಯದಲ್ಲಿ ಕುಂಕುಮವಿಟ್ಟುಕೊಂಡ ಪೂಜಾರಯ್ಯ, ತೇಜಸ್ವಿಯಾಗಿದ್ದಾನೆ ! ಕಣ್ಣು ಹೊಳೆಯುತ್ತಿವೆ. ಊರಿನವರಿಗೆ ಇದು ಮಾಮೂಲು ದೃಶ್ಯ. ಈ ಅಮ್ಮನ ಉತ್ಸವದಲ್ಲಿ ಎಲ್ಲಿಲ್ಲದ ಕಳೆ ಪೂಜಾರಯ್ಯನಿಗೆ ಬರುತ್ತದೆ ಎಂದು ಎಲ್ಲರೂ ಬಲ್ಲರು.

"ಧಡ್ ! ಕಟ್ !" ಸಿದ್ಧವಾಗಿದ್ದೇನೆ ಎನ್ನುವಂತೆ ಹನುಮಪ್ಪ ತಬಲದ ಮೇಲೆ ಕೈ ಆಡಿಸಿದ. ಪೂಜಾರಯ್ಯ ಅಮ್ಮನಿಗೆ ಕೈ ಮುಗಿದು ಹಾಡಲು ಬಾಯಿ ತೆಗೆದ.

ಆದರೆ ?

ನದಿಯ ನೀರು ಸಂಪೂರ್ಣವಾಗಿ ರಾಡಿಯಾಗಿ ಹೋಗಿದೆ. ಬೀಸುತ್ತಿದ್ದ ಗಾಳಿ ಸ್ಥಬ್ಧವಾದಂತಾಗಿ ಉಸಿರು ಕಟ್ಟಿದಂತಾಗಿವೆ ಎಲ್ಲರಿಗೂ. ಮನೆಯಲ್ಲಿ ಪಾನಕ ಹಂಚುವ ಸಂಭ್ರಮದಲ್ಲಿದ್ದ ಪೂಜಾರಯ್ಯನ ಮಡದಿ, ಹೊಸಲೆಡವಿ ಜ್ಞಾನ ತಪ್ಪಿ ಬಿದ್ದಿದ್ದಾಳೆ. ಹಣೆ ಒಡೆದು ರಕ್ತ ಬರುತ್ತಿದೆ. ಒಬ್ಬಳೇ ಒಬ್ಬಳು. ಯಾರೂ ಗಮನಿಸಿಲ್ಲ.

ಪೂಜಾರಯ್ಯ ಹಾಡಲು ಪ್ರಯತ್ನಿಸುತ್ತಿದ್ದಾನೆ. ಆಗಲೊಲ್ಲದು. ನಾಲಿಗೆ ಹೊರಳುವುದೇ ಇಲ್ಲ. ಮತ್ತೆ ಮತ್ತೆ ಪ್ರಯತ್ನ ಮಾಡುತ್ತಿದ್ದಾನೆ. ಅದೇ ನೋಟ. ಹಾಡಲಾರದೆ ಕಣ್ಣೀರು ಬಿಡುತ್ತಿದ್ದಾನೆ. ಏನೋ ಮಾತನಾಡಲು ಪ್ರಯತ್ನಿಸುತ್ತಾನೆ, ಆಗಲೊಲ್ಲದು. ಗುಂಪಿನಲ್ಲಿ ಯಾರನ್ನೋ ಅರಸುತ್ತಿದ್ದಾನೆ. ಕಾಣಲೊಲ್ಲದು ! ಯಾರಿಗೂ ಏನೂ ಅರ್ಥವಾಗಲೊಲ್ಲದು,

ಹಾಡಲು ಕುಳಿತ ಅಯ್ಯನವರು ಅಳುತ್ತಿರುವುದು ಕಂಡು ಎಲ್ಲರಿಗೂ ಕಸಿವಿಸಿ ಯಾಗತೊಡಗಿದೆ.

"ಅಯ್ಯನೋರು ಯಾಕೆ ಅಳೋದು, ಹಾಡ್ತಾ ಇಲ್ಲ!" ಮಾದಯ್ಯ ಕೇಳಿದ.

ಬರುತ್ತಿದ್ದ ಕಂಬನಿಯನ್ನು ಬೆರಳಿನಲ್ಲಿ ಮಿಡಿದು ಸಂಜ್ಞೆ ಮಾಡಿದರು ಬಾಯ ಹತ್ತಿರ.

"ಏನು ಗಂಟಲು ನೊಯ್ತದಾ ?" ತಲೆ ಆಡಿಸಿದ ಪೂಜಾರಯ್ಯ, ನಾಲಿಗೆಯತ್ತ ಕೈ ತೋರಿಸಿದ. ಮಾದಪ್ಪ ನೋಡುತ್ತಿದ್ದಾನೆ ಪೂಜಾರ ಯ್ಯನ ನಾಲಿಗೆ ಸಂಪೂರ್ಣವಾಗಿ ನೀಲಿಯಾಗಿ ಹೋಗಿದೆ. ಪೂಜಾರಯ್ಯ ಗುಂಪಿನತ್ತ ನೋಡುತ್ತಲೇ ಇದ್ದಾನೆ. ಯಾರನೋ ಅರಸುವ ಕಣ್ಣು. ದೃಷ್ಟಿಸಿ ನೋಡಿದ ಮಾದಪ್ಪ ಉದ್ವೇಗದಿಂದ ಕಿರುಚಿದ.

"ಯಾವನೋ ಮನೆ ಮುರುಕ ಮಾಟ ಮಾಡವನೆ. ಕಣ್ರಪ್ಪೋ ಅಯ್ಯನವರಿಗೆ," ಒಮ್ಮೆಯೇ ನರಸಿಂಹಯ್ಯನ ನೆನಪಾಯಿತು ಮಾದಪ್ಪನಿಗೆ. ಎಲ್ಲೋ? ಆ ಕಳ್ಳ ಬ್ರಾಹ್ಮಣ! ಇಲ್ಲ! ಆ ಗುಂಪಿನಲಿಲ್ಲ. ಆತ ಅಲ್ಲಿ ಹೇಗೆ ಬಂದಾನು?"

ನದಿಯದಂಡೆಯ ಹುಣಿಸೇಮರದ ಕೆಳಗೆ ಮಣ್ಣಿನ ಬೊಂಬೆಯೊಂದರ ಹಣೆಗೆ ಬೂದಿ ಬಳಿಯುತ್ತಿದ್ದಾನೆ. ಅದರ ನಾಲಿಗೆಗೆ ಮುಳ್ಳು ಚುಚ್ಚಿ ವಕ್ರ ನಗೆ ನಗುತ್ತಿದ್ದಾನೆ. ಅವನ ಅಟ್ಟಹಾಸವೇ ಅಟ್ಟಹಾಸ!

"ಏನು ಮಾಡೋದು?" ಸಹಸ್ರಾರು ಕಂಠಗಳು ಒಂದೇ ಬಾಗೆ ಚಿಂತೆಗೊಂಡಿವೆ. ಹಲವರು ಭಯದಿಂದ ನಡುಗುತ್ತಿದ್ದಾರೆ. ಮುಂದೇನು ಆಗುವುದೋ ಎಂದೂ ಕೂತಿದ್ದವರ ತಲೆಯೆಲ್ಲಾ ಅದರಲ್ಲೇ ತುಂಬಿ ಹೋಗಿದೆ. ಎಲ್ಲರ ಮುಖದಲ್ಲೂ ಗಾಭರಿ ರಿಂಗಣ ವಾಡುತ್ತಿದೆ.

ಕಣ್ಣೀರಿಡುತ್ತಿದ್ದ ಪೂಜಾಯ್ಯ, ಹನುಮಪ್ಪ ತಬಲ ಕುಟ್ಟಲು ಇಟ್ಟು ಕೊಂಡಿದ. ಕಲ್ಲನ್ನೇ ತೆಗೆದುಕೊಂಡು ರಭಸದಿಂದ ಗರ್ಭಗುಡಿ ಹೊಕ್ಕು, ಅಮ್ಮನವರ ಕಾಲಿಗೆ ಬಲವಾಗಿ ಕುಟ್ಟತೊಡಗಿದ.

ಕೂತಿದ್ದವರೆಲ್ಲಾ ಭಯದಿಂದ ನೀರಾಗಿದ್ದಾರೆ. ಮೊದಲೇ ರುದ್ರಮ್ಮ

ಕಾಲು ಕುಟ್ಟಿದರೆ ಮತ್ತೇನಾಗುತ್ತದೋ? ಎಲ್ಲರ ಬಾಯಿನ ದ್ರವವೂ ಆರಿ ಹೋಗಿದೆ. ಬೊಂಬೆಗಳಂತೆ ಅಲುಗಾಡದೆ ಇದ್ದಾರೆ.

ಪೂಜಾರಯ್ಯ ಬಿರುಸಿನಿಂದ ಅಮ್ಮನ ಕಾಲಿಗೆ ಪೆಟ್ಟು ಹಾಕುತ್ತಿದ್ದಾನೆ; ಏನಿದು! ಏಲಾ?

ಹೌದು! ಕೇಳುತ್ತಿರುವುದು ಕಲ್ಲಿನ ಶಬ್ಧವಲ್ಲ! ಅದಾವುದೋ ವಾದ್ಯದ ಧ್ವನಿಯಂತಿದೆ! ಪೂಜಾರಯ್ಯ ಕುಟ್ಟುತ್ತಲೇ ಇದ್ದಾನೆ. "ಹೋ" ಕಲ್ಲಿನಲ್ಲಿ ಸ್ವರ ಬರುತ್ತಿದೆ!—ಸಪ್ತಸ್ವರ! ಗುಂಪಿನಲ್ಲಿದ್ದವನೊಬ್ಬ ಆನಂದ ಉದ್ವೇಗದಿಂದ ಕೂಗಿದ. ಹೃದಯ ತುಂಬಿ ಬಂದಂತೆಲ್ಲಾ ಅಮ್ಮನಿಗೆ ಹೊಡೆತ ಜಾಸ್ತಿಯಾಗುತ್ತಿದೆ. ಸಂಗೀತದನಾದ ಅಷ್ಟೇ ಬಿರುಸಿನಿಂದ ಕೇಳಿಬರುತ್ತಿದೆ. ಉಸಿರು ಬಿಟ್ಟರೆ ಎಲ್ಲಿ ಕೇಳಿಸುವುದು ತಪ್ಪಿ ಹೋಗುವುದೋ ಎಂದು ಮೂಕವಾಗಿ ಪೂಜಾರಯ್ಯನನ್ನು ನೋಡುತ್ತಿದ್ದಾರೆ. ಕೇಳುತ್ತಿದ್ದಾರೆ. ಸುಮಾರು ಇದೇ ರೀತಿ ಸಾಗಿದೆ. ಒಮ್ಮೆಯೇ ಸ್ವರ ನಿಂತಿತು! ಮುಂಪರಿನ ಜೋಲಿ ತಿರುಗು ಮುರುಗಾದಂತೆ ಆಗಿ ನೋಡುತ್ತಾರೆ! ಪೂಜಾರಯ್ಯನ ದೇಹ ಅಮ್ಮನ ಕಾಲಿನ ಮೇಲೆ ಒರಗಿದೆ.

ಚನ್ನಕೇಶವ ಕಟ್ಟಿಕೊಳ್ಳುತ್ತಿದ್ದಾನೆ. ಜಕ್ಕಣ್ಣ ನಿಮಿತ್ತ ಮಾತ್ರ. ಚೆನ್ನಕೇಶವ ಅವನಲ್ಲಿ ಆ ವಿರ್ಭೂತವಾದಂತಿದೆ. ಕಗ್ಗಲ್ಲು ಮೇಣವಾಗಿದೆ ಅವನ ಕೈಯ್ಯಲ್ಲಿ. ಹಗಲು ರಾತ್ರಿ ಎನ್ನದೆ ದೇವಸ್ಥಾನದ ಕೆಲಸ ಸಾಗ ತೊಡಗಿದೆ. ಕಲೆಯ ಅಂಶ ಅಂಶವನ್ನು ಬೆಣ್ಣೆಯಂತೆ ಕಡೆದು ಕಡೆದು ತೆಗೆಯುತ್ತಿದ್ದಾನೆ. ಆದರೂ ಸಂಪೂರ್ಣ ರೂಪು ಕೊಡಲು ಹಿಂದು ಮುಂದು ನೋಡುತ್ತಿದ್ದಾನೆ ಜಕ್ಕಣ್ಣ.

ಆತ ಬಲ್ಲ, ಬೇಲೂರು ಗ್ರಾಮ ಮುಂದೆ ಲಕ್ಷೋಪ ಲಕ್ಷ ಜನ ಭಕ್ತರ ಗೂಡಾದೀತೆಂದು. ಅಂತೆಯೇ, ಹೊಯ್ಸಳರ ಹೆಸರು ಇತಿಹಾಸದಲ್ಲಿ ಉಳಿಯುವುದು ಇದರಿಂದಲೇ ಎಂದುಕೂಡ ಬಲ್ಲ. ಏನೋ ನಿರೀಕ್ಷಿಸುತ್ತಿದ್ದಾನೆ!

"ಯಾಕೆ ಜಕ್ಕಣ್ಣನವರೇ! ಬಹಳವಾಗಿ ಯೋಚಿಸುತ್ತಿದ್ದೀರಲ್ಲ?"

"ಹೋ, ಪ್ರಭು! ಶರಣು?"

"ಏನೋ ಯೋಚಿಸುತ್ತಿದ್ದೀರಿ ಎಂದೆ ?"

"ಸನ್ನಿಧಾನಕ್ಕೆ ನಾನೇ ಬಂದು ಭಿನ್ನವಿಸಿ ಕೊಳ್ಳಬೇಕು ಎಂದಿದ್ದೆ. ಅಷ್ಟರಲ್ಲೇ ಸನ್ನಿಧಾನ ಇಲ್ಲಿಗೆ ದಯಮಾಡಿಸಿತು !"

"ಏನು ಹೇಳಿ."

"ಇಲ್ಲಿಗೆ ಹರಿದಾರಿ ದೂರದಲ್ಲಿ ಕಲ್ಯಾಣಪುರವಿರುವುದು ಸನ್ನಿಧಾನದ ಗಮನಕ್ಕೆ ಬಂದಿರಬೇಕು."

"ಹೌದು, ಗೊತ್ತಿದೆ."

"ಅಲ್ಲಿಯ ಗುಡಿಯ ಅಮ್ಮನ ವಿಗ್ರಹದ ಕೆಳಗೆ ಒಂದು ಕಲ್ಲು ಇದೆ ಪ್ರಭು. ತರಿಸಿಕೊಡಬೇಕು"

"ಒಂದು ಕಲ್ಲಿಗೆ ಅಷ್ಟು ದೂರ ಹೋಗಬೇಕೆ ? ಇಲ್ಲಿಯೇ ಯಥೇಚ್ಛ ವಾಗಿದೆಯಲ್ಲ ಜಕ್ಕಣ್ಣನವರೇ ?"

"ಅಂತಲ್ಲ ಪ್ರಭೂ ! ಆ ಕಲ್ಲು ದೈವಾಂಶದಿಂದ ಕೂಡಿದುದು. ಭಕ್ತನ ಮೂಕ ವೇದನೆ, ಪ್ರಾರ್ಥನೆ ಆ ಕಲ್ಲಿನಿಂದ ಸ್ವರ ರೂಪದಲ್ಲಿ ಹೊರ ಬಿದ್ದಿದೆ. ಅದಿಲ್ಲದೆ ಏನೋ ಕೊರತೆ ಆದಂತೆ ಆಗಿದೆ"

"ಆಗಲಿ ತರಿಸಿ ಕೊಡೋಣ !"

ಜಕ್ಕಣ್ಣ ಪೂಜಾರಯ್ಯನ ಸಪ್ತಸ್ವರದ ಕಲ್ಲನ್ನು ಬೇಲೂರು ಕಲೆಯ ಅನಂತ ಶರಧಿಯ ಕಟ್ಟಡದಲ್ಲಿ ಸೇರಿಸಿ ಕಟ್ಟಿ ಬಿಟ್ಟಿದ್ದಾನೆ ! ಆ ಕಲಾ ವೈಭವಕ್ಕೆ ವಿಶ್ವವೇ ಬೆರಗುಗೊಂಡಿದೆ. ಮೂಕವಾಗಿದೆ. ಎಷ್ಟು ಹೊತ್ತು ಸವಿದರೂ ತೃಪ್ತಿಯಾಗದು !

ಮಾನವ ಕೌತುಕ ಮನೋಭಾವ ಉಳ್ಳವ. ಯಾವುದನ್ನಾದರೂ ಸರಿಯೇ ಕುಕ್ಕಿ ನೋಡದೆ ಬಿಡುವುದಿಲ್ಲ. ಕುಡಿಯುವ ನೀರಿನಲ್ಲಿ ಮುಳುಗಿ ಶೋಧಿಸಿದ ! ನಡೆಯುವ ನೆಲ ಗುದ್ದಿ ಕೆದಕಿ ಬಗ್ಗಿ ನೋಡಿದ ! ಹಸಿರು ಪ್ರಕೃತಿಯನ್ನೂ ಕೌತುಕದಲ್ಲಿ ಜರಡಿಯಾಡಿ ಬಿಟ್ಟ ! ಹೆತ್ತ ತಾಯಿಯ ಗರ್ಭ ಕೆದಕಿ ನೋಡಿದ ! ತೃಪ್ತಿ ಉಂಟೆ ? ಹ್ಞ ! ತೃಪ್ತಿ ಇಲ್ಲ. ಆಗಸದತ್ತ ಹೊರಟ ! ಚಂದಿರನ ಸುತ್ತಲು ಗುಳ್ಳೆ ನರಿಯಂತೆ ಸುತ್ತಾಡಿದ. ಯಾಕೋ

ಕೈ ತಟ್ಟಿದ ! ಆನಂದದಿಂದ ಕೂಗಿಕೊಂಡ. ಇಂದೋ, ನಾಳೆಯೋ ಒಳತೂರಿ ಕಾಫಿ ಕಾಸಿಕೊಂಡು ಕುಡಿದು ಬಂದು ಬಿಡುತ್ತಾನೆ !

ಇನ್ನು ಕೆಳಗೆ ಸಿಕ್ಕಿದ ಅಮಾನುಷ ಕಲ್ಲು ? ಕುತೂಹಲದಿಂದ ಸ್ವರ ಕೇಳಿ ಬರುವುದೇ ಎಂದು ಬಂದವರು ಹಲವಾರು ವರ್ಷಗಳಿಂದ ಕುಟ್ಟಿ ಕುಟ್ಟಿ ಅರ್ಧವೆಲ್ಲಾ ಹಾಳು ಮಾಡಿಬಿಟ್ಟಿದ್ದಾರೆ. ಕಲ್ಲು ಶಿಥಿಲವಾಗತೊಡಗಿದೆ.

ಆದರೂ ಎಲ್ಲವನ್ನೂ ನೆನೆದಾಗ, ಮಾನವಶಕ್ತಿಗೂ ಮೀರಿದ ಶಕ್ತಿ-ಸಹನೆ ಇದ್ದರೆ, ದೈವಶಕ್ತಿ ಎಂದೂ ಕರೆಯೋಣ ! ಇದೆಯೆಂದು ಭಾಸವಾಗುತ್ತದೆ. ಅವನಶಕ್ತಿಗೆ ಎರಡು ಬಿಂದು ಮೂಡಿ ಬರುತ್ತದೆ. ಅದು ಬಾಷ್ಪ ಬಿಂದುವಾಗಿರಲೇಬೇಕು !

# ರುಕ್ಮಿಣಿ

"ಅವಳನ್ನು ಕುಲೀನ ಮನೆತನದ ಒಡತಿ ಎಂದು ಯಾರು ಹೇಳಬಹುದು. ಗೊತ್ತಿದ್ದವರಿಗೆ ಮಾತ್ರ ಗೊತ್ತು ! ಅವಳ ಎಲ್ಲಾ ಬಯಕೆ, ಆಸೆಗಳು ಮಾಯವಾಗಿವೆ. ಇದೇ ಬೇಕು ಅದೇ ಬೇಕು, ಎಂಬ ಹಿಂದಲ ಛಲವಿಲ್ಲ. ಮರ್ಯಾದೆಯಿಂದ ಜೀವನ ಮಾಡಬೇಕು ಎನ್ನುವ ಪ್ರಬಲ ಆಸೆ. ಗರತಿಯ ಜೀವನದ ಹಿರಿಮೆಯ ಅರ್ಥ ಈಗ ಅವಳಿಗೆ ಆಗಿದೆ......."

# ೧೦

ಬಾರಿನ ಮೂಲೆಯಲ್ಲಿನ ಒಂದು ದುಂಡು ಮೇಜು. ಅದರ ಪಕ್ಕದಲ್ಲಿ ಎರಡು ಕುರ್ಚಿಗಳು. ಒಂದರಲ್ಲಿ ನರಸಯ್ಯನವರು, ಮತ್ತೊಂದರಲ್ಲಿ ಮೇರಿ. ಟೇಬಲಿನ ಮೇಲೆ ಬೀರು ಬಾಟಲ್, ಗ್ಲಾಸ್. ನರಸಯ್ಯ ತಲೆದೂಗುತ್ತಿದ್ದಾರೆ. ಅಲ್ಲ, ಬೀರು ತಲೆದೂಗಿಸುತ್ತಿದೆ. ಆ ಮಂಪರಿನಲ್ಲೂ ಪಕ್ಕದಲ್ಲಿ ಕುಳಿತ್ತಿದ್ದ ಮೇರಿಯ ಸೊಂಟದತ್ತ ಕೈ ಹಾಕುತ್ತಾರೆ. ತಮ್ಮತ್ತ ಎಳೆದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ನರಸಯ್ಯನವರ ಮನೋಭಾವ ಅರಿತ ಮೇರಿ ಅವರ ಸಮಿಪಕ್ಕೆ ಕುರ್ಚಿ ಎಳೆದುಕೊಂಡು ಕುಳಿತು ತೊಡೆಯ ಮೇಲೆ ಕೈ ಹಾಕುತ್ತಾಳೆ.

ಈಗ ನರಸಯ್ಯನವರಿಗೆ ಸಮಾಧಾನ. ಮತ್ತೊಂದು ಗ್ಲಾಸ್ ಬೀರು. ಅವಳ ಕೈ ಎಳೆದು ಚುಂಬಿಸಿ, ಮತ್ತೊಂದು ಗ್ಲಾಸ್, ಮಗದೊಂದು. ಖಾಲಿ ಗ್ಲಾಸಿಗೆ ಬಗ್ಗಿಸುವ ಕೆಲಸ ಮೇರಿಯದು.

ಮಂಪರಿನ ಜೋಲು. ನರಸಯ್ಯನವರು ಹಾಗೆಯೇ ಕುರ್ಚಿಯ ಹಿಂದಕ್ಕೆ ವಾಲಿದರು. ಈಗ ಮೇರಿಯ ಕೆಲಸ ಮುಗಿದಂತೆ. ಕುರ್ಚಿ ಹಿಂದಕ್ಕೆ ಸರಿಸಿದ ಮೇರಿ, ಸಿಗರೇಟಿಗೆ ಬೆಂಕಿ ಹತ್ತಿಸಿ ನಿಧಾನವಾಗಿ ಹೊಗೆ ಬಿಡತೊಡಗಿದಳು.

ಅಂದು ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ನರಸಯ್ಯನವರು ಠೇವಣಿಯನ್ನು ಕಳೆದು ಕೊಂಡಿದ್ದರ ಬಗ್ಗೆ ಬಹಳ ಯೋಚಿಸತೊಡಗಿದಳು. ಅವಳಿಗೆ ಹೇಳಿಕೊಳ್ಳಲಾರದ ವೇದನೆಯಾಗುತಿತ್ತು. ಅಂದ ಮೇಲೆ ನರಸಯ್ಯನವರ ಸ್ಥಿತಿ ಹೇಳುವಂತೆಯೇ ಇರಲಿಲ್ಲ. ನರಸಯ್ಯನವರು ಎಂದೂ ಅಷ್ಟು ಕುಡಿದಿದ್ದ ನೆನಪಿಲ್ಲ ಮೇರಿಗೆ. ಒಳಗಿನ ಧಗೆ ಆರಿಸಲು ಕುಡಿತ.

ಒಳಗಿನ ಧಗೆ ಹೆಚ್ಚಿದಂತೆ ಮತ್ತೆ ಮತ್ತೆ ಕುಡಿತ. ಮುಂದೆ ಏನು ಮಾಡ ಬೇಕೆಂದು ತೋಚಲಿಲ್ಲ ಮೋರಿಗೆ. ನಂದಿಹೋಗುತ್ತಿದ್ದ ಸಿಗರೇಟಿನಲ್ಲಿ ಮತ್ತೊಂದು ಹತ್ತಿಸಿಕೊಂಡು, ತುಂಡನ್ನು ನೆಲದಲ್ಲಿ ಹಾಕಿ ತುಳಿದು. ಬ್ರೇಸರಿ ಯನ್ನು ಸರಿಯಾಗಿ ಕಟ್ಟಿಕೊಂಡು ಮತ್ತೆ ಕುಳಿತಳು.

ನರಸಯ್ಯನವರು ಈ ಚುನಾವಣೆಗೆ ಕಮ್ಮಿಯೇನು ಖರ್ಚು ಮಾಡಿ ರಲಿಲ್ಲ. ಹೇಗಾದರೂ ಮಾಡಿ ಎದುರಾಳಿ ತುಪ್ಪದಪ್ಪನನ್ನು ಸೋಲಿಸುವ ಛಲ. ಹಣ ನೀರಿನಂತೆ ಹರಿದಿತ್ತು. ಚುನಾವಣೆಯ ಕೂಗಾಟ. ಕಾರಿನ ಶಬ್ದ, ರಿಕ್ಷಾ ಗದ್ದಲ, ಜನವೋ ಜನ, ಮಾತೋ ಮಾತು. ಚುನಾವ ಣೆಯ ಖರ್ಚಿಗೆಂದು ತೆಗೆದಿಟ್ಟುಕೊಂಡಿದ್ದ ಹಣ ಚುನಾವಣೆಗೆ ಹದಿನೈದು ದಿನದ ಮುಂಚೆಯೇ ಖರ್ಚಾಗಿಹೋಯಿತು. ನರಸಯ್ಯನವರ ಕೈ ಆಗಲೇ ಬರಿದು. ಜೇನು ಕೆದಕಿದಂತೆ ಈ ವ್ಯವಹಾರ. ಮಧ್ಯೆ ಬಿಡುವಂತಿಲ್ಲ. ಒಂದು ಕಡೆ ಘನತೆಯ ಮಾತಾದರೆ, ಮತ್ತೊಂದು ಕಡೆ ಛಲದ ಪ್ರಶ್ನೆ. ಇದ್ದ ಮನೆಯನ್ನು ಆಧಾರ ಮಾಡದೆ ಬೇರೆ ವಿಧಿಯಿರಲಿಲ್ಲ.

ಮತದಾನ ಎಲ್ಲವೂ ಮುಗಿದಿತ್ತು. ಎಣಿಕೆ ಪ್ರಾರಂಭವಾಗಿತ್ತು. ಒಂದು, ಮೂವತ್ತು, ನೂರು, ಸಾವಿರ, ಹತ್ತುಸಾವಿರ, ಹದಿನಾಲ್ಕುಸಾವಿರ ಎದುರಾಳಿ ತುಪ್ಪದಪ್ಪನ ಸಂಖ್ಯೆ ಏರುತಿತ್ತೆ ವಿನಃ ನರಸಯ್ಯನವರದಲ್ಲ ಸಂಜೆಯ ವೇಳೆಗೆ ಎಣಿಕೆ ಮುಗಿದಿತ್ತು. ತುಪ್ಪದಪ್ಪ ತುಂಬಾ ಪ್ರಚಂಡ ಬಹುಮತದಿಂದ ಆಯ್ಕೆ ಹೊಂದಿದ್ದ. ನರಸಯ್ಯನವರು ಠೇವಣಿ ಕೂಡ ಕಳೆದುಕೊಂಡುಬಿಟ್ಟಿದ್ದರು. ಅಲ್ಲಿ ನಿಲ್ಲಲಾರದೆ ನರಸಯ್ಯನವರು ಹೊರ ಬಂದರು.

ನರಸಯ್ಯನವರ ಹೆಸರು ಹಿಡಿದು ಗಂಟಲು ಹರಿದು ಹೋಗುವಂತೆ ಪ್ರಚಾರ ಮಾಡುತ್ತಿದ್ದ ಕಂಟ್ರಾಕ್ಟರ ಕರಿಯಪ್ಪ, ದುಗ್ಗೋಜಿ, ಪುಟ್ಟ ಮುದ್ದಪ್ಪ ಎಲ್ಲಾ ತುಪ್ಪದಪ್ಪನ ಸುತ್ತಾ ನಿಂತು ನಗುತ್ತಾ ಮಾತನಾಡುತ್ತಾ ನಿಂತಿದ್ದಾರೆ. ನಾಯಿ ಸೂಳೆಮಕ್ಕಳು, ಅವರಿರುವಲ್ಲಿಗೆ ನುಗ್ಗಿ ಕೆನ್ನೆಗೆರಡು ಅಪ್ಪಳಿಸುವುದೇ ಎಂದು ಯೋಚಿಸಿದರು ನರಸಯ್ಯ. ಎಲ್ಲರೂ ಅಷ್ಟೆ, ಯಾರೇನೂ ಕಮ್ಮಿಯಲ್ಲ. ಗಾಳಿ ಬಂದಾಗ ತೂರಿಕೊಳ್ಳುವ ಬುದ್ಧಿ ವಂತರೆ.

ಒಮ್ಮೆಯೇ ಆರುವರ್ಷಗಳ ಹಿಂದಿನ ಘಟನೆ ನೆನಪಿಗೆ ಬಂದಿತು. ಫುಡ್ಹಾರಿ ರಾಮಕೃಷ್ಣಯ್ಯ ಸೋತಾಗ ಅವನ ಕಣ್ಣು ತಪ್ಪಿಸಿ ಎದುರಾಳಿಯಾಗಿ ನಿಂತು ಗೆದ್ದಿದ್ದ ಭ್ರಮಪ್ಪನನ್ನು ಕಂಡು ಸ್ತುತಿ ಮಾಡಲಿಲ್ಲವೆ? ಅಂದು ತಾನು ಮಾಡಿದ್ದು ಇಂದು ಇನ್ನೊಬ್ಬರು ತನಗೆ ಮಾಡುತ್ತಿದ್ದಾರೆ. ಅಂದು ಕಟ್ಟಿಕೊಂಡ ಬುತ್ತಿ ಇಂದು ಉಣ್ಣುವ ಸಮಯ ಬಂದಿದೆ.

ಹೊರ ಬಂದರು. ಅವರ ಹಿಂದೆ ಹರಿ. ಮನಸ್ಸಿನಲ್ಲಿಯೇ ಅಂದುಕೊಂಡರು; ಪೆದ್ದುಪೆದ್ದಾಗಿ ಆಡಿದರೂ ಪರವಾಗಿಲ್ಲ. ಇರುವುದರಲ್ಲಿ ಈ ಮುಟ್ಠಾಳನೇ ವಾಸಿ. ತಿಂದ ಉಪ್ಪು ಇನ್ನೂ ಕರಗಿಲ್ಲ. ಯಾರಿಗೆ ಗೊತ್ತು? ಎಂದು ಕೈ ಕೊಟ್ಟು ಹೋಗುತ್ತಾನೋ!

"ಲೋ ಹರಿ...."

"ಸಾರ್"

"ಒಂದು ರಿಕ್ಷಾ ಕೂಗು? ಹರಿ ರಿಕ್ಷಾ ಕೂಗಿದ. ನರಸಯ್ಯನವರು ಹತ್ತಿದರು. ಅವರ ಹಿಂದೆ ಹರಿ.

"ಎಲ್ಲಿಗೆ?" ರಿಕ್ಷಾದವನು ಕೇಳಿದ.

"ಎಲ್ಲಿಗೆ ಬಿಡು ಎನ್ನಲಿ ಸಾರ್?"

"ಥತ್, ಬಿಡು ಅನ್ನು ಮೇರಿ ಹತ್ತಿರ"

ಹರಿ ಹೇಳಿದ 'ಲಿಬರ್ಟಿಬಾರ್' ರಿಕ್ಷಾದ ಗದ್ದಲದಲ್ಲಿ ನರಸಯ್ಯನವರ ತಲೆಯಲ್ಲಿಯ ಯೋಚನೆಗಳು ದಾರಿ ಕಾಣದೆ ಡಿಕ್ಕಿ ಹೊಡೆದುಕೊಂಡು ಅಂಗತವಾಗಿ ಬೀಳತೊಡಗಿದ್ದವು.

ഠ ഠ ഠ ഠ

ನರಸ, ನರಸಯ್ಯನಾದದ್ದು ಆರು, ಏಳುವರ್ಷಗಳ ಹಿಂದೆ. ಚಿಕ್ಕ ವಯಸ್ಸಿನಿಂದಲೂ ಉಢಾಳನಾಗಿ ಉಂಡು ಬೆಳೆದಿದ್ದ ನರಸಯ್ಯನಿಗೆ ಕೆಲಸ ಮಾಡಬೇಕು ಎಂದರೆ ಪ್ರಾಣ ಹತ್ತಿ ಹೋಗುತ್ತಿತ್ತು. ಅಪ್ಪ ಸತ್ತಮೇಲೆ ಇದ್ದ ದಿನಸಿ ಅಂಗಡಿ ಮಾರಿ, ಬಂದ ದುಡ್ಡಿನಲ್ಲಿ ನಾಲ್ಕಾರು ದಿನ ಸ್ನೇಹಿತರಿಗೆ ಮೋಜು ಮಾಡಿಸಿ ಕಳೆದಿದ್ದ. ಸಂಪೂರ್ಣ ಕೈ ಬರಿದಾದಮೇಲೆಯೇ ನರಸನಿಗೆ ಎಚ್ಚರವಾದದ್ದು.

ವಯಸ್ಸಿನ ಉದ್ದಕ್ಕೂ ಬೆಳೆಸಿಕೊಂಡಿದ್ದ ದುಃಶ್ಚಟಗಳಿಗೆ ಹಣ ಒದಗಿಸುವುದಿರಲಿ, ಊಟಕ್ಕೂ ಚಿಂತೆ ಪಡಬೇಕಾಯಿತು. ಆದರೆ ಅದೃಷ್ಟ ಬಹು ಚೆನ್ನಾಗಿತ್ತು. ಬಹುದಿನ ಕಷ್ಟಪಡಲಿಲ್ಲ. ಚುನಾವಣೆಯ ಕಾಲ; ವೀರಭದ್ರನೊಂದಿಗೆ ಸೇರಿಕೊಂಡ. ಕಾರಿನಲ್ಲಿ ಕೂತು ಕೂಗಿದ ಕಾಂಗ್ರೇಸ್ಸಿಗೆ ಓಟು ಕೊಡಿ ಎಂದು.

ಕಾರಿನ ನಾಲ್ಕು ಚಕ್ರ ವೇಗವಾಗಿ ಸಾಗಿತ್ತು. ಇದ್ದ ಶಕ್ತಿಯನ್ನೆಲ್ಲಾ ಉಪಯೋಗಿಸಿ ಕೂಗುತ್ತಿದ್ದ ನರಸ. 'ನಿಮ್ಮ ಓಟು ಯಾರಿಗೆ? ಕಾಂಗ್ರೆಸ್ಸಿನ ರಾಮಕೃಷ್ಣಯ್ಯನವರಿಗೆ ಚುನಾವಣೆ ಮುಗಿದಿತ್ತು. ಜನತಾ ಸೇವಕ ಧುರಿಣ ಎಂದು ಪ್ರಖ್ಯಾತರಾದ ರಾಮಕೃಷ್ಣಯ್ಯನವರು ಚುನಾಯಿತರಾಗಿದ್ದರು. ನರಸ ಅವರ ನೆಚ್ಚಿನ ಸಂಗಡಿಗನಾಗಿಬಿಟ್ಟ, ಕೈ ಕೆಸರು ಮಾಡಿಕೊಳ್ಳದೆ ಮೊಸರುಣ್ಣುವ ಕಲೆ ಚೆನ್ನಾಗಿ ಕಲಿತ.

ಜನಸೇವಕ ರಾಮಕೃಷ್ಣಯ್ಯನವರಿಂದ ಏನೂ ಕೆಲಸವಾಗಬೇಕಾದರೂ ಸರಿಯೇ ಅದು ನರಸನ ಮುಖಾಂತರವೇ ಆಗಬೇಕು. ಕಂಟ್ರಾಕ್ಟ ಕೊಡಿಸುವುದೆ ? ಪರ್ಮಿಟ್? ಪೂಜಾರಿಯ ಕೈಯಲ್ಲೆ ಆಗಬೇಕು ಮಂಗಳಾರತಿ. ನರಸ ಒಪ್ಪದಿದ್ದರೆ ಆ ಕೆಲಸಕ್ಕೆ ಮಣ್ಣು ಬಿತ್ತು ಎಂದೇ ಅರ್ಥ.

ಮೂರುವರ್ಷ ಎನ್ನುವುದರಲ್ಲಿ ನರಸ ಬಲಿತು ಕುಳವಾದ. ಕಾರ್ಪೊರೇಷನ್ ಚುನಾವಣೆಗೆ ನಿಂತು ಗೆದ್ದುಬಿಟ್ಟ. ಅಂದಿನಿಂದ ನರಸ, ನರಸಯ್ಯನಾದ. ರಾಮಕೃಷ್ಣಯ್ಯನ ಜೊತೆ ಸೇರಿಕೊಂಡು ತುರ್ತುಪರಿಸ್ಥಿತಿಯಲ್ಲಿ ಚೆನ್ನಾಗಿ 'ದೇಶಭಕ್ತಿ' ತೋರಿಸಿ ; 'ದೇಶಸೇವೆ' ಮಾಡಿಕೊಂಡು ನಗರದಲ್ಲಿ ಒಂದು ಮನೆ ಮಾಡಿಕೊಂಡ.

ನರಸ ಬುದ್ಧಿವಂತ. ತನ್ನ ಕೆಲಸ ಆಗಬೇಕು ಎಂದರೆ ಕತ್ತೆ ಹಲ್ಲನ್ನು ಕೂಡ ಉಜ್ಜಿಬಿಡುವ ಮನುಷ್ಯ. ನರಸಯ್ಯ ಎಂದೂ ತನ್ನ ಸ್ವಂತ ಅಭಿಪ್ರಾಯವನ್ನು ಪ್ರಕಟಿಸುವ ಮೂರ್ಖತನಕ್ಕೆ ಹೋದುದಿಲ್ಲ. ಇನ್ನೊಬ್ಬರ ವಿಚಾರ ಧಾರೆಯನ್ನೇ ಅನುಮೋದಿಸುತ್ತಾ ಮನಸ್ಸಿನಲ್ಲಿಯೇ ತನ್ನ ಪಾಲಿಗೆ ಇದರಿಂದ ಎಷ್ಟು ಲಾಭ, ಪ್ರಯೋಜನವಾಗಬಹುದು ಎಂದು ಲೆಕ್ಕ ಹಾಕುವಾತ. ಗಾಂಧಿ ತತ್ವ ಕಾಂಗ್ರೆಸ್ಸಿನ ನಿಸ್ವಾರ್ಥತೆ ಅವನ ರಕ್ಷಾಇಂಧನವಾಗಿತ್ತು.

ನರಸಯ್ಯನಿಗೆ ಸ್ವಲ್ಪ ಕಚ್ಚಿ ಭದ್ರವಿಲ್ಲ, ಅಷ್ಟೆ. ನರಸಯ್ಯನಾದಮೇಲೆ, ಅದರಲ್ಲಿಯೇ ಒಂದು ರೀತಿಯ ದೊಡ್ಡಸ್ಥಿಕೆ ತೋರಿಸತೊಡಗಿದ. ಆಗಲೇ ರುಕ್ಮಿಣಿಯ ಪರಿಚಯವಾದುದು.

o o o o

ರುಕ್ಮಿಣಿ. ದುಂಡಾನೆಯ ಮುಖ. ಕೆಂಪಡರಿದ ಅರೆತೆರೆದ ತುಟಿ. ಮೋಹಕ ಕಣ್ಣು. ಕುಲೀನ ಮನೆತನದ ಒಡತಿ ಎಂದೂ ಯಾರು ಹೇಳಬಹುದು. ಜಾತಿಯಿಂದೇನೂ ರುಕ್ಮಿಣಿ ಸೂಳೆಯಲ್ಲ. ಜಾತಕದ ಗೆರೆ ಸ್ವಲ್ಪ ಕೆಟ್ಟಿದ್ದರಿಂದ ಈ ವಿಷ ವೃತ್ತಿಗೆ ಇಳಿದಿದ್ದಳು. ಕೆಲವು ದಿನಗಳಲ್ಲೇ ಅವಳಿಗೆ ಸಾಕಾಗಿ ಹೋಯಿತು. ಈ ನರಕದಿಂದ ಪಾರಾಗುವುದು ಹೇಗೆ ಎಂದು ಯೋಚಿಸತೊಡಗಿದಳು.

ಅವಳ ಎಲ್ಲಾ ಬಯಕೆ ಆಸೆಗಳು ಮಾಯವಾಗಿದ್ದವು. ಅದೇ ಬೇಕು, ಇದೇ ಬೇಕು ಎಂಬ ಹಿಂದಿನ ಛಲವಿಲ್ಲ. ಮರ್ಯಾದೆಯಿಂದ ಜೀವನ ಮಾಡಬೇಕು ಎನ್ನುವ ಪ್ರಬಲ ಆಸೆ. ಗರತಿಯ ಜೀವನದ ಹಿರಿಮೆಯ ಅರ್ಥ ಈಗ ಅವಳಿಗೆ ಆಗಿದೆ.

ರುಕ್ಮಿಣಿಯ ಮುಗ್ಧಭಾವಕ್ಕೆ ಮರುಳಾಗಿದ್ದ ನರಸಯ್ಯ, ಎಷ್ಟೋ ಹೆಣ್ಣುಗಳಲ್ಲಿ ಕಾಣದ ದೊಡ್ಡತನವನ್ನು ಕಂಡಿದ್ದ.

ಒಮ್ಮೆ ನರಸಯ್ಯನ ತೋಳ ತೆಕ್ಕೆಯಲ್ಲಿ ಸಿಕ್ಕಿಕೊಂಡ ರುಕ್ಮಿಣಿ ತನ್ನ ಮನದೊಳಗಿನ ಬಯಕೆಯನ್ನು ಹೇಳಿದಳು. ಕುಡಿತದ ಅಮಲೋ ಏನೋ ಅಂತೂ ಅವನು ಅವಳ ಬುಟ್ಟಿಯೊಳಗೆ ಬಿದಿದ್ದ. ಅವಳನ್ನು ಹೊಸ ಮನೆಗೆ ಕರೆದುಕೊಂಡುಬಂದ.

ಗೊತ್ತಿದ್ದವರಿಗೆ ಮಾತ್ರ ಗೊತಿತ್ತು. ಹೊಸಬರಾದರೆ ರುಕ್ಮಿಣಿ ನರಸಯ್ಯನ ಮಡದಿ ಎಂದೇ ತಿಳಿದುಕೊಳ್ಳುತ್ತಾರೆ, ಗರತಿಯ ಜೀವನದ ಕಲ್ಪನೆ ಕಟ್ಟಿಕೊಂಡಿದ್ದ ರುಕ್ಮಿಣಿ ಅದೇ ರೀತಿ ನಡೆದುಕೊಳ್ಳ ತೊಡಗುತ್ತಾಳೆ. ಮುಂಜಾನೆಯೇ ಎದ್ದು ಅಂಗಳ ಗುಡಿಸಿ ಮನೋಹರವಾಗಿ ರಂಗವಲ್ಲಿ ಇಡುತ್ತಾಳೆ. ನರಸಯ್ಯ ಏಳುವುದರಲ್ಲಿ ಸ್ನಾನ ಮಾಡಿ ಕಾಫಿ ತಿಂಡಿ ಸಿದ್ಧಪಡಿಸುತ್ತಾಳೆ.

ಮಾಡಿಕೊಂಡ ಹೆಂಡತಿಗೇನು ಕಮ್ಮಿಯಿಲ್ಲ ರುಕ್ಮಿಣಿಯ ನಡತೆ. ಹಿಂದಿನ ಜೀವನವೆಲ್ಲವೂ ಕೆಟ್ಟ ಕನಸು ಎನ್ನುವಂತೆ ಆಗಿಬಿಟ್ಟಿದೆ. ರಾತ್ರಿ ಎಷ್ಟು ಹೊತ್ತಾದರೂ ಸರಿಯೇ ನರಸಯ್ಯ ಬರುವವರೆಗೂ ಊಟ ಮಾಡದೆ ಕಾದು ಕುಳಿತಿರುತ್ತಾಳೆ.

ಹೊಸ ಮನೆ ಕೊಂಡಿದ್ದ ನರಸಯ್ಯ ರುಕ್ಮಿಣಿಯಂತಹ ಬೆಳಕನ್ನು ಸಂಪಾದಿಸಿದ್ದು ಒಂದು ಪುಣ್ಯವೇ. ಅದೃಷ್ಟ ನರಸಯ್ಯನ ಸುತ್ತಾ ಗಿರ ಗಿರನೆ ಸುತ್ತತೊಡಗಿದೆ. ನರಸಯ್ಯ ಮುಟ್ಟಿದ್ದೆಲ್ಲಾ ಚಿನ್ನ ಕಾಂಗ್ರೆಸ್ಸಿನ ಪ್ರತಿಷ್ಠಾಪಿತ ಪುಢಾರಿಯಾಗಿಬಿಟ್ಟ.

ಅದೃಷ್ಟದೊಂದಿಗೆ ನರಸಯ್ಯನ ದುಃಶ್ಚಟವೂ ಪ್ರಬಲವಾಗಿ ಬೆಳೆದಿತ್ತು. ಒಮ್ಮೊಮ್ಮೆ ಕುಡಿಯುತ್ತಿದ್ದ ನರಸಯ್ಯ ದಿನಕ್ಕೆ ಹಲವು ಬಾರಿ ಕುಡಿಯ ತೊಡಗಿದ. ರುಕ್ಮಿಣಿಯ ರೂಪು ಸಪ್ಪೆಯಾಗತೊಡಗಿತು. ಬೇರೆ ದೇಹದ ಬಯಕೆ. ದೇಹದ ಉದ್ದಕ್ಕೂ ಹಣ ಸುರಿಯುತ್ತಿದ್ದ. ಆನಂದಪಟ್ಟು ಬರುತ್ತಿದ್ದ.

ರುಕ್ಮಿಣಿಯ ಗುಣವನ್ನು ಮೆಚ್ಚಿಕೊಂಡವನು ಹರಿ. ಅವಳನ್ನು ಪ್ರೀತಿಯಿಂದ ಅಕ್ಕಾ ಎಂದು ಕರೆಯುತ್ತಿದ್ದ. ರುಕ್ಮಿಣಿಗೆ ಬಂಧುವಿಲ್ಲದ ಕೊರತೆ ಹರಿಯಿಂದ ತುಂಬಿತ್ತು. ನರಸಯ್ಯನ ಇತ್ತೀಚಿನ ನಡವಳಿಕೆ ಯನ್ನು ಹರಿಯಿಂದ ತಿಳಿದಿದ್ದರೂ, ತುಟಿ ಎರಡು ಮಾಡುತ್ತಿರಲಿಲ್ಲ. ನಾಲ್ಕು ದಿನದ ಕಾವು, ಆಮೇಲೆ ಎಲ್ಲವೂ ಸರಿಯಾಗುತ್ತದೆ ಎಂದು ತನಗೆ ತಾನೇ ಸಮಾಧಾನ ಮಾಡಿಕೊಳ್ಳುವಳು. ಇಂತ ದುಷ್ಟ ಯೋಚನೆಗಳಿಂದ ತನ್ನ ತಪಸ್ಸಿಗೆ ಎಲ್ಲಿ ಭಂಗ ಬರುವುದೋ ಎಂದು ಅಂಜಿ ಅದನ್ನು ನೆನೆಯಲು ಕೂಡ ಹೆದರುವಳು.

ಪ್ರತಿದಿನವೂ ನರಸಯ್ಯನಿಗೆ ಶುಭ ಕೋರಿ ದೇವರಿಗೆ ಅಡ್ಡ ಬೀಳುವಳು.

o o o o

**ಮೇರಿ.** ಮದ ತರಿಸುವ ರೂಪು. ಅವಳ ಮಾದಕ ನೋಟ-ನರಸಯ್ಯನ ಉಸಿರನ್ನೇ ಸ್ತಬ್ಧಗೊಳಿಸಿ ಬಿಡುವುದು. ಅವಳು ಧೂಮಪಾನ ಮಾಡುವ ವೈಖರಿ ನರಸಯ್ಯನಿಗೆ ಬಹು ಇಷ್ಟ.

ಒಮ್ಮೊಮ್ಮೆ ನರಸಯ್ಯ ರುಕ್ಮಿಣಿಗೂ, ಮೇರಿಗೂ ತಾಳೆ ಹಾಕಿ ನೋಡುತ್ತಾನೆ. ರುಕ್ಮಿಣಿ ಹಳ್ಳಿಯ ಗುಗ್ಗು. ನಾಗರೀಕತೆಯ ಸೋಂಕೆ ಇಲ್ಲದವಳಂತೆ ಆಡುತ್ತಾಳೆ. ಆದರೆ ಮೇರಿ ? ಒಳ್ಳೆಯ ಪಠಾಣ ಕುದುರೆ ಇದ್ದ ಹಾಗೆ. ಇಂತಹ ಕುದುರೆ ಇಟ್ಟುಕೊಳ್ಳದ ಮೇಲೆ ಗಂಡಸಾಗಿ ಏನು ಪ್ರಯೋಜನ ಎನ್ನುವಾತ.

ಗಂಡಸಿನ ದೌರ್ಬಲ್ಯ ಮೇರಿಗೆ ಚೆನ್ನಾಗಿ ಗೊತ್ತು. ಅದರ ಉಪಯೋಗ ಸಂಪೂರ್ಣವಾಗಿ ಪಡೆದು ಕೊಳ್ಳುತ್ತಾಳೆ. ತನ್ನ ರೂಪದ ಬುರುಗು ಬಹು ದಿನ ಉಳಿಯುವುದಿಲ್ಲ ಎಂದು ಬಲ್ಲಳು. ಮುಂದಿನ ನಿರಾತಂಕ ಜೀವನಕ್ಕೆ ತೊಂದರೆಯಾಗಬಾರದೆಂದು ಈಗಲಿಂದಲೇ ತಯಾರಿ, ತನ್ನಲ್ಲಿಗೆ ಬರುವವ ರಿಂದ ತಗಣೆಯಂತೆ ದುಡ್ಡು ಹೀರುತ್ತಾಳೆ.

ಅವಳೇ ತಬ್ಬಿಕೊಳ್ಳುತ್ತಾಳೆ ಚುಂಬಿಸುತ್ತಾಳೆ ; ಕುಡಿಸುತ್ತಾಳೆ. ಚೆನ್ನಾಗಿ ಕುಡಿಸುತ್ತಾಳೆ. ಮೈಮೇಲೆ ಎಚ್ಚರವಿಲ್ಲದಂತೆ ಕುಡಿಸುತ್ತಾಳೆ. ಬಂದವನು ಎಚ್ಚರ ತಪ್ಪಿದ ಮೇಲೆ ಆರಾಮವಾಗಿ ಪಕ್ಕದಲ್ಲಿ ಕುರ್ಚಿ ಹಾಕಿ ಕೊಂಡು ಕುಳಿತು ಸಿಗರೇಟು ಸೇದುತ್ತಾ ಕಾಲಾಡಿಸುತ್ತಾಳೆ. ಬಂದವನು ಬಂದ ಕೆಲಸವನ್ನೇ ಮರೆಯುವಂತೆ ಮಾಡಿ ಬಿಡುತ್ತಾಳೆ.

ಈ ಕಸುಬಿನಲ್ಲಿ ಮೇರಿ ಚೆನ್ನಾಗಿ ಪಳಗಿದವಳು. ರಾಜಕೀಯ ಪುಢಾರಿ ಗಳು, ಸರ್ಕಾರಿ ಅಧಿಕಾರಿಗಳು, ಜನಸೇವಕರು ಎಲ್ಲರೂ ಅವಳಲ್ಲಿಗೆ ಬರು ತ್ತಾರೆ. ಅವರ ಕಸುವಿಗೆ ತಕ್ಕಂತೆ ಹೆಜ್ಜೆ ಹಾಕಿ ಬಿಡುತ್ತಾಳೆ. ಇಷ್ಟು ಮಾತ್ರ ನಿಜ ಎಲ್ಲೋ ಕೆಲವು ಮಂದಿ ಜಾಣರು ಮಾತ್ರ ಬಂದ ಕೆಲಸ ಮರೆಯದೆ, ಮೇರಿಯಿಂದ ಪಡೆದುಕೊಳ್ಳುವವರು ಅವರಲ್ಲಿ ನರಸಯ್ಯನೂ ಒಬ್ಬ.

ಏನೋ ಒಂದು ರೀತಿಯ ಹುಚ್ಚು. ಬೇಕಾದರೆ ಮೇರಿಗಿಂತ ಸುಂದರ ವಾದ ಹುಡುಗಿಯರು ಸಿಕ್ಕ ಬಲ್ಲರು. ಆದರೆ ನರಸಯ್ಯನಿಗೆ ಮೇರಿಯ ಮಾದಕತೆ, ಠೀವಿ ಹುಚ್ಚು ಹಿಡಿಸಿ ಬಿಡುತ್ತದೆ. ಸಂತೋಷವಾದರೆ ಮೇರಿ ಯಲ್ಲಿಗೆ ಓಡಿ ಬರುತ್ತಾನೆ. ದುಃಖವಾದರೆ ಮೇರಿಯಲ್ಲಿಗೆ ಓಡಿಹೋಗು ತ್ತಾನೆ. ಅವಳ ಹೆಗಲ ಮೇಲೆ ಕೈಹಾಕಿಕೊಂಡು ಕುಡಿಯುತ್ತಾನೆ. ತಲೆದೂಗುತ್ತಾನೆ.

ನರಸಯ್ಯನ ಮಟ್ಟಿಗೆ ಹೇಳುವುದಾದರೆ ಮೇರಿ ಸ್ವಲ್ಪ ರಿಯಾಯಿತಿ

ತೋರಿಸುತ್ತಾಳೆ. ನರಸಯ್ಯನ ಬುದ್ಧಿವಂತಿಕೆ, ವ್ಯವಹಾರ ಕೌಶಲ್ಯ ಲೆಕ್ಕ ಹಾಕಿದ ಮೇರಿ, ಮುಂದೆ ಮಂತ್ರಿಯಾದಾನು ಎಂದು ಅಂದಾಜು ಕಟ್ಟು ತ್ತಾಳೆ.

ಚುನಾವಣೆ ಕಳೆದ ಮೇಲೆ ಮನೆಯತ್ತ ಹೋಗಿ ಆಗಲೇ ಒಂದುವಾರ ಕಳೆದಿತ್ತು. ನರಸಯ್ಯನಿಗೆ ಅಲ್ಲಿಗೆ ಹೋಗಲೇ ಬೇಕೆಂಬ ನಿಯಮವೇನೂ ಇಲ್ಲ. ಆದರೆ ಹಣ ಇಲ್ಲದ ಮೇಲೆ ಒಂದು ನೊಣವೂ ತನ್ನತ್ತ ತಿರುಗಿ ನೋಡುವುದಿಲ್ಲ ಎಂದು ಅನುಭವದಿಂದ ಬಲ್ಲ. ಮೇರಿಯಲ್ಲಿಗೆ ಹೋಗೋಣ ವೆಂದು ಹೊರಟ.

ಮತ್ತೆ ನೆನಪಾಯಿತು, ಮೇರಿಯ ನಿಷ್ಠೂರದ ಮಾತು. "ನೀವು ಈ ರೀತಿ ಮಾಡಿದರೆ ನಾವು ಬದುಕುವುದಾದರೂ ಹೇಗೆ? ಅದೇ ವೇಳೆಗೆ ತುಪ್ಪದಪ್ಪ ಬಂದು ಕಿಸೆಯಿಂದ ನೋಟಿನ ತಕ್ಕೆ ತೆಗೆದು ಮೇರಿಯತ್ತ ಚಾಚಿ, ಅವಳನ್ನು ಹಾಗೆಯೇ ಎಳೆದುಕೊಂಡು ಹೊಟ್ಟೆ ಕುಣಿಸುತ್ತಸಾಗಲಿಲ್ಲವೆ? ಇದಕ್ಕಿಂತ ಹೆಚ್ಚಿನ ಅವಮಾನವೇನಾಗಬೇಕು? ಮತ್ತೆ ಮನೆಯುತ್ತ ತಿರುಗಿದ.

ಮನೆಯ ಮುಂದೆ ಗುಡ್ಡೆ ಗುಡ್ಡೆಯಾಗಿ ಮರಳು ಇಟ್ಟಿಗೆ ಬಿದ್ದಿದೆ. ಮುಂದೆ ಗೋಡೆ ಕಟ್ಟಿಸಲು ಪಾಯ ತೋಡುತ್ತಿದ್ದಾರೆ. ಇದು ತನ್ನ ಮನೆಯೇ ಎಂದು ನಿಂತು ನೋಡಿದ. ಸಂದೇಹವಿಲ್ಲ ಅವನದೇ. ದುಡ್ಡಿ ಗಾಗಿ ಮನೆಯನ್ನು ಆಧಾರ ಮಾಡಿದುದರ ನೆನಪಾಯಿತು. ಬಾಗಿಲಿನಲ್ಲಿ ನಿಂತ ರುಕ್ಮಿಣಿ ಕಣ್ಣೀರಿಡುತ್ತಿದ್ದಾಳೆ. ಬಹಳ ಇಳಿದು ಹೋಗಿದ್ದಾಳೆ.

ನರಸಯ್ಯ ಬರುತ್ತಿರುವುದನ್ನು ಕಂಡು ರುಕ್ಮಿಣಿಗೆ ಹಿಡಿಸಲಾರದಷ್ಟು ಸಂತೋಷ. ಒಳ ಹೋಗಿ ತಂಬಿಗೆಯಲ್ಲಿ ಕಾಲಿಗೆ ನೀರು ತಂದಳು. ಕಾಲು ತೊಳೆದುಕೊಂಡು ಒಳ ನಡೆದ. ವರಾಂಡವಲ್ಲಿಯ ನೆಲದ ಮೇಲೆ ದಿನ ಪತ್ರಿಕೆ ಬಿಚ್ಚಿ ಅದರ ಮೇಲೆಯೇ ಕುಳಿತು ಓದುತ್ತಿದ್ದ ಹರಿ ಚುನಾವಣೆಯ ಸುದ್ದಿಯನ್ನು ಯಜಮಾನ ಬಂದುದನ್ನು ಕಂಡು, ಪತ್ರಿಕೆ ಮಡಚಿ ಕುರ್ಚಿಯ ಸಂದಿ ಎಸೆದು ಎದ್ದು ನಿಂತ.

ಬಹಳ ಹಸಿದಿತ್ತು. ರುಕ್ಮಿಣಿ ತಂದು ಕೊಟ್ಟ ತಿಂಡಿ ತಿಂದು ಮುಗಿಸಿದ. ಸ್ವಲ್ಪ ಸಮಾಧಾನವಾಯಿತು. ನಿಂತಿದ್ದ ಹರಿಯತ್ತ ಒಮ್ಮೆ ನೋಡಿದ.

"ಸಾರ್, ಮನೆಯನ್ನು ಸುಪರ್ದಿಗೆ ಬಿಟ್ಟು ಕೊಡಬೇಕಂತೆ" ಆಗಲಿ ಎನ್ನುವಂತೆ ಗೋಣಾಡಿಸಿದ ನರಸಯ್ಯ.

'ಅಕ್ಕನಿಗೆ ಒಂದು ವಾರದಿಂದ ಜ್ವರ. ತುಂಬಾ ನಿತ್ರಾಣವಾಗಿದ್ದಾಳೆ.' ರುಕ್ಮಿಣಿಯನ್ನು ನೋಡಿದಾಗಲೇ ಈ ಸಂಗತಿ ನರಸಯ್ಯನಿಗೆ ಅರ್ಥವಾಯಿತು. ಹಿಂದೆ ಮಾಡಿದ ಪಾಪದ ಪಕ್ವಾನ್ನ ಈಗ ಉಣ್ಣುತ್ತಿದ್ದಾಳೆ ಎಂದುಕೊಂಡ ಮನಸ್ಸಿನಲ್ಲಿಯೇ. ಸಮಾಧಾನಕ್ಕೆ ಕೇಳಿದ.

'ಡಾಕ್ಟರ ಹತ್ತಿರ ಕರೆದುಕೊಂಡು ಹೋಗಿದ್ದಿಯೇನು ?'

'ಹೌದು. ಇಂಜಕ್ಷನ್, ಮಾತ್ರೆ ಎಲ್ಲಾ ಬರೆದು ಕೊಟ್ಟಿದ್ದಾರೆ.

"ಎಲ್ಲಿ ? ಚೀಟಿ ಕೊಡು."

ಹರಿ ಡಾಕ್ಟರು ಬರೆದುಕೊಟ್ಟ ಚೀಟಿ ಕೊಟ್ಟ. ಅದನ್ನು ಕಿಸೆಗೆ ಸೇರಿಸಿಕೊಂಡ ನರಸಯ್ಯ ರುಕ್ಮಿಣಿಗೆ ಹೇಳಿದ. 'ಒಳಗೇನಾದರೂ ಸ್ವಲ್ಪ ದುಡ್ಡಿದ್ದರೆ ಕೊಡು ರುಕ್ಕೂ ಔಷಧಿ ತರುತ್ತೇನೆ.' ಆವನ ಮಾತು ಕೇಳಿದ ಅವಳಿಗೆ ದುಃಖ ತಡೆಯಲಾಗಲಿಲ್ಲ. ಬಲವಂತವಾಗಿ ತಡೆದುಕೊಂಡು ಒಳಬಂದು. ಕತ್ತಿನಲ್ಲಿದ್ದ ಸರ ಬಿಚ್ಚಿ ತೆಗೆದುಕೊಂಡು ಬಂದು ನರಸುಯ್ಯನ ಕೈಯಲ್ಲಿಟ್ಟಳು. ಆತ ಬೇಡವೆನ್ನಲಿಲ್ಲ. ಸರವನ್ನೊಮ್ಮೆ ಅವಳನ್ನೊಮ್ಮೆ ನೋಡಿದ ನರಸಯ್ಯ ಚಪ್ಪಲಿಯನ್ನೂ ಸಹ ಮೆಟ್ಟಿಕೊಳ್ಳದೆ ಬೀದಿಗಿಳಿದ. ಬೀದಿಯ ತಿರುವಿನಲ್ಲಿ ಮತ್ತೆ ಮನೆಯತ್ತ ನೋಡಿದ. ರುಕ್ಮಿಣಿ ಬಾಗಿಲಿಗೆ ತಲೆ ಒರಗಿಸಿ ತನ್ನತ್ತಲೇ ನೋಡುತ್ತಿದ್ದಾಳೆ. ಮಾರ್ಕೆಟ್ಟಿನತ್ತ ಸಾಗಿದ. ಎಂದೂ ಅತ್ತ ಬಂದುದಿಲ್ಲ. ಔಷಧಿ ಅಂಗಡಿಗಾಗಿ ಹುಡುಕಾಡಿದ.

ಒಮ್ಮೆಯೇ ತುಪ್ಪದಪ್ಪನ ನೆನಪು. ಮೈಯಲ್ಲಿ ಎಲ್ಲಿಲ್ಲದ ಕಾವು. ದೈತ್ಯ ಸಂಚಾರವಾದಂತೆ. ಈ ದಿನ ಬರಲಿ ಸರಿಯಾಗಿ ಪಾಠಕಲಿಸಿಬಿಡುತ್ತೇನೆ. ಎಂದು ಕೈಯಲ್ಲಿದ್ದ ಸರದತ್ತ ಒಮ್ಮೆ ನೋಡಿಕೊಂಡ. ಮತ್ತೆ ಮೇರಿಯ ಮನೆಯತ್ತ ಬರಬರನೆ ಹೆಜ್ಜೆಹಾಕಿದ, ಕೈಯಲ್ಲಿದ್ದ ಔಶಧಿ ಚೀಟಿಯನ್ನು ಹರಿದು ಗಾಳಿಗೆ ತೂರಿದ.

೦ ೦ ೦ ೦

ಹಂಗೆ ಏನು ಮಾಡಬೇಕೆಂದು ತೋಚದೆ ತಲೆಯಮೇಲೆ ಕೈ ಇಟ್ಟು ಕೊಂಡು ಕುಳಿತುಬಿಟ್ಟ. ಏನು ಉಪಚಾರ ಮಾಡಿದರೂ ರುಕ್ಮಿಣಿಯನ್ನು ಉಳಿಸಿಕೊಳ್ಳಲಾಗಲಿಲ್ಲ.

ಔಷಧಿ ತರುತ್ತೇನೆ ಎಂದು ಹೋದ ನರಸಯ್ಯ ಒಂದು ವಾರವಾದರೂ ಪತ್ತೆಯಿಲ್ಲ. ಅವನು ಹೋದ ಎರಡು ದಿನದಲ್ಲೇ ರುಕ್ಮಿಣಿಗೆ ವಾಂತಿ, ಬೇಧಿ. ತನ್ನಲ್ಲಿ ಇದ್ದ ಹಣವನ್ನೆಲ್ಲಾ ಸೇರಿಸಿ ರುಕ್ಮಿಣಿಗೆ ಡಾಕ್ಟರಲ್ಲಿ ಉಪಚರಿಸಿದ. ಎಷ್ಟು ಕಷ್ಟಪಟ್ಟರೂ ರುಕ್ಮಿಣಿಯನ್ನು ಮಾತ್ರ ಉಳಿಸಿ ಕೊಳ್ಳಲಾಗಲಿಲ್ಲ.

ನರಸಯ್ಯ ಬಾರಲಿಲ್ಲ ಎಂದು ರುಕ್ಮಿಣಿಯ ದಹನ ಕ್ರಿಯೆ ಮಾಡದೆ ಇರುವಂತಿಲ್ಲ. ಋಣದ ಭಾರವನ್ನು ಹೊರಲಾರದವನಾಗಿದ್ದ. ಮಿತ್ರರ ಸಹಾಯದಿಂದ ದಹನ ಕ್ರಿಯೆಗೆ ಏರ್ಪಾಡು ಮಾಡಿದ. ಮಿತ್ರ ಜೋಸೆಫ್ ನಿಗೆ ಹೇಳಿದ, "ನೀನು ಅಕ್ಕನ ಹೆಣ ಸ್ಮಶಾನಕ್ಕೆ ಸಾಗಿಸು, ಕಡೆಯಪ್ರಯತ್ನ ವಾಗಿ ಯಜಮಾನರನ್ನು ಹುಡುಕಿಕೊಂಡು ಬರುತ್ತೇನೆ."

ಇವನಿಗೆ ಒಂದು ಕಡೆ ತಡೆಯಲಾಗದ ದುಃಖ ಮತ್ತೊಂದು ಕಡೆ ಕರ್ತವ್ಯದ ಹೊರೆ. ಜೋಸೆಫ್ ಮನೆಯಿಂದ ರುಕ್ಮಿಣಿ ದೇಹ ಸಾಗಿಸು ತ್ತಲೇ, ಹರಿ ನರಸಯ್ಯ ಸಾಮಾನ್ಯವಾಗಿ ಇರಬಹುದಾದ ಸ್ಥಳಗಳನ್ನೆಲ್ಲಾ ಹುಡುಕಿದ ಎಲ್ಲಿಯೂ ಪತ್ತೆ ಇಲ್ಲ. ಲಿಬರ್ಟಿ ಬಾರಿನ ಮೂಲೆ ಮೂಲೆಯನ್ನು ಶೋಧಿಸಿಬಿಟ್ಟ. ಮೇರಿಯೂ ಇಲ್ಲ ನರಸಯ್ಯನೂ ಇಲ್ಲ. ಕಡೆಯ ಪ್ರಯತ್ನ ವಾಗಿ ಮೇರಿಯ ಮನೆಗೆ ವಿಳಾಸ ತೆಗೆದುಕೊಂಡು ನಡೆದ.

ಹರಿಯ ಅಂದಾಜು ಸರಿಯಾಗಿತ್ತು. ನರಸಯ್ಯ ಮೇರಿಯ ತೆಕ್ಕೆಯ ಲ್ಲಿದ್ದ. ಅರೆ ನಗ್ನಳಾಗಿದ್ದ ಮೇರಿಯ ದೇಹಕ್ಕೆ ಮಗುವಿನಂತೆ ಅತುಕೊಂಡಿದ್ದ.

"ಸಾರ್...."

ವಿಳಂಬ ಮಾಡಿದರೆ ಪ್ರಯೋಜನವಿಲ್ಲ, ಎಂದು ಅರಿತ ಹರಿ ಕೂಗಿದ.

ತೆಕ್ಕೆ ಸಡಿಲವಾಯಿತು. ಇಬ್ಬರೂ ಹರಿಯನ್ನು ಕಣ್ಣಿನಲ್ಲೇ ತಿನ್ನು ವಂತೆ ನೋಡಿದರು. ನರಸಯ್ಯ ಕೋಪದಿಂದ ಕೇಳಿದ.

"ಮುಟ್ಠಾಳ. ಯಾಕೋ ಬಂದೆ ?"

"ಅಕ್ಕಾ..

"ಮುಚ್ಚು ಬಾಯಿ ?" ನರಸಯ್ಯ ಸಿಟ್ಟಿನಿಂದ ಕಿರುಚಿದ. ಎಲ್ಲಿ ಕಂತೆ ಪುರಾಣ ಬಿಚ್ಚುತ್ತಾನೊ ಎಂಬ ಭಯ.

"ಸಾರ್, ಅಕ್ಕ ಮುಂಜಾನೆ ದೈವಾಧೀನಳಾದಳು. ಬೇಗ ಬಂದರೆ ಕಡೆಯ ದರ್ಶನವಾಗುತ್ತದೆ."

"ಹಾಳಾಗಿಹೋಗಲಿ, ಹೋಗು."

ಸಾರ್...."

....ಮತ್ತೆ ವಾರದ ಹಿಂದಿನ ದಿನದ ಘಟನೆಯ ನೆನಪು ನರಸಯ್ಯನಿಗೆ. ಜೇಬಿನಲ್ಲಿ ಡಾಕ್ಟರು ಬರೆದುಕೊಟ್ಟ ಚೀಟಿ. ಕೈಯಲ್ಲಿ, ರುಕ್ಮಿಣಿ ಕತ್ತಿನಿಂದ ಬಿಚ್ಚಿಕೊಟ್ಟ ಸರ. ಬೀದಿಯ ತಿರುವು. ಮತ್ತೆ ಮನೆಯತ್ತ ನೋಟ. ರುಕ್ಮಿಣಿ ಬಾಗಿಲಿಗೆ ತಲೆ ಒರಗಿಸಿ ತನ್ನತ್ತಲೇ ನೋಡುತ್ತಿದ್ದಾಳೆ. ..... ....

ಮೇರಿಯ ಕೈ ಕೊಡವಿಕೊಂಡು ಸರ್ರನೆ ಎದ್ದು ನಿಂತ ನರಸಯ್ಯ, ಆತ ಎದ್ದುದನ್ನು ಕಂಡು ಮೇರಿ ಅವನ ಕೈ ಹಿಡಿದು ಗ್ಲಾಸಿಗೆ ಬೀರು ಬಗ್ಗಿಸಿದಳು.

"ಒಂದು ನಿಮಿಷ ಮೇರಿ, ಹೋಗಿ ಬರುತ್ತೇನೆ."

ಬೀರು ತುಂಬಿದ್ದ ಗ್ಲಾಸನ್ನು ವಯ್ಯಾರದಿಂದ ಅವನ ಮುಖದತ್ತ ಹಿಡಿದ ಮೇರಿ, ನರಸಯ್ಯನನ್ನು ಒತ್ತಿ ನಿಂತಳು. ಹರಿಗೆ ಸಿಟ್ಟು ತಡೆಯಲಾಗಲಿಲ್ಲ. ಮೇರಿಯ ಕೆನ್ನೆಗೊಂದು ಬಲವಾಗಿ ಬಿಗಿದು, ನರಸಯ್ಯನ ಕೈ ಹಿಡಿದು ತಲೆಬಾಗಿಲು ತೆಗೆದುಕೊಂಡು ನಡದೇಬಿಟ್ಟ !

ಬಹು ಹೊತ್ತಿನವರೆಗೂ ಕಾದು ಸಾಕಾದ ಜೋಸೆಫ್ ಮತ್ತು ಸಂಗಡಿಗರು, ರುಕ್ಮಿಣಿಯ ಚಿತೆಗೆ ಬೆಂಕಿ ತಗುಲಿಸಿ, ಮಂಡಿಯೂರಿ ಕುಳಿತು ಅವಳ ಆತ್ಮಕ್ಕೆ ಶಾಂತಿ ಕೋರಿದರು. ಒಣಗಿದ ಸೌವೆ. ಸಣ್ಣಗೆ ಗಾಳಿ ಬೇರೆ. ಚಿತೆಯ ಸುತ್ತಾ ತನ್ನ ಕೆನ್ನಾಲಿಗೆಯನ್ನು ಬಿಚ್ಚಿಕೊಂಡು ಧಗ ಧಗ ಉರಿಯುತ್ತಿತ್ತು.

ದೂರದಲ್ಲಿ ಹರಿ ನರಸಯ್ಯ ಓಡಿಬರುತ್ತಿದ್ದಾರೆ. ವೇಳೆ ಮಿಂಚಿತ್ತು. ಹರಿ ನಿಂತು. ಉರಿಯುತ್ತಿದ್ದ ಚಿತೆಯತ್ತ ಕೈಮಾಡಿ ತೋರಿಸಿದ. ನರಸಯ್ಯ ನೋಡಿದ ನೋಡುತ್ತಲೇ ಇದ್ದ. ಕಾರಿನ ಶಬ್ದ. ರಿಕ್ಷಾದ ಗದ್ದಲ ಚುನಾವಣೆಯ ಪ್ರಚಾರದ ಆರ್ಭಟೆ, ಹಣದ ಕಿಣಿ ಕಿಣಿ ಶಬ್ದ. ಲಿಬರ್ಟಿ ಬಾರು

ಗ್ಲಾಸಿನ ತುಂಬಾ ಬೀರು ಸ್ತನ ಕುಣಿಸುತ್ತಾ ನಗ್ನಳಾಗಿ ನಿಂತ ಮೇರಿ, ಕಿಸೆಯಿಂದ ಹಣ ತೆಗೆದು ಹೊಟ್ಟೆ ಕುಣಿಸುತ್ತಾ ಬಂದ ತುಪ್ಪದಪ್ಪ, ಮನೆಯ ಮುಂದೆ ಗುಡ್ಡೆಯಾಗಿ ಬಿದ್ದ ಮರಳು ಇಟ್ಟಿಗೆ, ಕೈಯಲ್ಲಿ ಆಸ್ಪತ್ರೆ, ಚೀಟಿ ಚಿನ್ನದ ಸರ, ರುಕ್ಮಿಣಿಯ ಕರುಳಿರಿಯುವ ನೋಟ, ಕುಡಿತ, ಮೇರಿಯ ತೆಕ್ಕೆ, ಉರಿಯುತ್ತಿರುವ ಬೆಂಕಿ ! ಕಿಟ್ಟನೆ ಕಿರುಚಿಕೊಂಡು ನರಸಯ್ಯ ದೊಪ್ಪನೆ ಬಿದ್ದ...............

ನಿಮ್ಮ ಓಟು ಯಾರಿಗೆ ?

"ಹುಚ್ಚಪ್ಪನಿಗೆ."

ಚಿಂದಿಯ ಬಟ್ಟೆ. ತಲೆ ಅಸ್ತವ್ಯಸ್ತವಾಗಿ ಬೆಳೆದು ಕೆದರಿ ಗಂಟು ಗಂಟಾಗಿದೆ. ಬೇಕಾದರೆ ದೇಹದ ಎಲಬು ಗೂಡನ್ನೆಲ್ಲಾ ಸರಾಗವಾಗಿ ಎಣಿಸಿ ಬಿಡಬಹುದು. ಕೈಯಲ್ಲಿ ಒಂದು ಸಿಗರೇಟು ಡಬ್ಬಿ. ಅದರ ಹಿಂದೆ ತೂತು ಮಾಡಿ ಉದ್ದಕ್ಕೆ ಒಂದು ದಾರಕೋಡು ಮೈಕಿನಂತೆ ಅದನ್ನು ತನ್ನ ಬಾಯಿಯ ಹತ್ತಿರ ಹಿಡಿದುಕೊಂಡು ಘಟ್ಟಿಯಾಗಿ ಕೂಗುತ್ತಾನೆ.

"ನಿಮ್ಮ ಓಟು ಯಾರಿಗೆ ?"

"ಹುಚ್ಚಪ್ಪನಿಗೆ !"

ಸುತ್ತಲೂ ನೆರೆದ ಹುಡುಗರು ತಮಾಷೆ ಮಾಡುತ್ತಾ ಚಪ್ಪಾಳೆ ತಟ್ಟಿ ಕಿರಿಚಿಕೊಳ್ಳುತ್ತಾರೆ. ಕಾಲು, ಗಂಟಲು ನೋಯುವವರೆಗೂ ಇದೇ ರೀತಿ ಸಾಗುತ್ತದೆ.

ಜೀವನದ ಕೊನೆಯ ಚುನಾವಣೆಗೆ ಹುರಿಯಾಳಗಿ ನಿಂತಿರುವ ನರಸಯ್ಯನ ಪ್ರಚಾರ ಏಕ ಪ್ರಕಾರವಾಗಿ ಸಾಗಿದೆ. ಗೆದ್ದೇಗೆಲ್ಲಬೇಕೆಂಬ ಛಲ. ಇಂದಲ್ಲ ನಾಳೆ ಆತ ಗೆಲ್ಲುವುದರಲ್ಲಿ ಸಂಶಯವಿಲ್ಲ.

# ನಾನಿನ್ನು ಬರೆಯಲಾರೆ

"ದೇಹದ ನರನಾಡಿಯನ್ನೆ ಕಿತ್ತು ಲೇಖನಿಯಾಗಿಸಿಕೊಂಡು ರಕ್ತದಲ್ಲಿಯೇ ಅದ್ದಿ ಅದ್ದಿ ಮನಃಪಟಲದ ಮೇಲೆ ಅಚ್ಚಳಿಯದಂತೆ ಒತ್ತಿ ಒತ್ತಿ ಬರೆಯಬಲ್ಲೆ ಆದರೂ........ನಾನಿನ್ನು ಬರೆಯಲಾರೆ"

೧೧

ಶ್ರಿಂಗಳ ದಿನ. ಶರಧಿಯ ನೀಲ ಜಲರಾಶಿ ನೃತ್ಯವಾಡತೊಡಗಿದೆ. ಮರಳಿನಲ್ಲಿ ಕಾಲು ಹುದುಗಿಸಿದ್ದೇನೆ. ಅದರಿಂದ ಏನೋ ತೃಪ್ತಿ. ಕೈಗೆಸಿಕ್ಕ ಕಪ್ಪೆಚಿಪ್ಪೊಂದನ್ನು ಅಂಗೈಯಲ್ಲಿಟ್ಟುಕೊಂಡಿದ್ದೇನೆ. ಬೆರಳುಗಳು ಮೆಲ್ಲನೆ ಅದರ ಮೇಲೆ ಕುಣಿಯತೊಡಗಿವೆ. ಮೆಲ್ಲ ಮೆಲ್ಲನೆ ನವಿಲಿನಂತೆ ಮನಸ್ಸಿನ ನೆರಳುಗಳು ಗರಿಗೆದರಿಕೊಳುತ್ತಿವೆ. ತಲೆಯಲ್ಲಿ ಮಿಂಚಿನಂತೆ ಯಾವುದಾದರೂ ಘಟನೆ ಹೊಳೆಯಬಹುದು. ದೀರ್ಘವಾಗಿ ಯೋಚಿಸಿ ಅದಕ್ಕೆ ಬರಹದ ಮೂಲಕ ಒಂದು ರೂಪ ಕೊಡಬಹುದು. ಕತೆಯಾಗುತ್ತದೆ. ಯಾವುದಾದರೂ ಒಂದು ಪತ್ರಿಕೆ ಪ್ರಕಟಿಸುತ್ತದೆ. ಓದಿದವರಲ್ಲಿ ಒಂದಿಬ್ಬರಾದರೂ ಮೆಚ್ಚಿಗೆ ಸೂಚಿಸಿ ಕಾಗದ ಬರೆಯಬಹುದು. ಆ ಸ್ಫೂರ್ತಿಯಲ್ಲಿ ಮತ್ತೊಂದರ ರಚನೆಯಾಗಬಹುದು.

ಹಿಂದಿನ ಕತೆ. ಇಲ್ಲ, ಇವು ಯಾವುದು ಇನ್ನು ಮುಂದೆ ಸಾಧ್ಯವಾಗುವುದಿಲ್ಲ. ಕತೆ ಬರೆಯಲಾಗುವುದಿಲ್ಲ. ಪ್ರತಿಕೆಯವರು ಪ್ರಕಟಿಸುವುದಿಲ್ಲ. ಒಂದಿಬ್ಬರು ಮೆಚ್ಚಿಗೆ ಸೂಚಿಸಿ ಕಾಗದ ಹಾಕುವುದಂತೂ ಸಾಧ್ಯವಿಲ್ಲ. ಇಲ್ಲ ಇನ್ನು ನಾನು ಬರೆಯಲಾರೆ. ಸಾಹಿತ್ಯ ಒರತೆ ಒಣಗಿತೆನ್ನುವ ಅಭಿಪ್ರಾಯವಲ್ಲ. ಬರೆಯಬಲ್ಲೆ. ಆದರೂ ಬರೆಯಲಾರೆ....

ದೀರ್ಘವಾಗಿ, ಬಹು ದೀರ್ಘವಾಗಿ ಹತ್ತಾರುಸಾರಿ ;ಅಳೆದು ಸುರಿದು ಈ ತೀರ್ಮಾನಕ್ಕೆ ಬಂದಿದ್ದೇನೆ. ನಾನಿನ್ನು ಬರೆಯಲಾರೆ.

ಬರೆಯಬೇಕಾದರೂ ಏಕೆ ? ಯಾರಿಗಾಗಿ ಬರೆಯಬೇಕು ?

ದೇಹದ ನರನಾಡಿಯನ್ನೇ ಕಿತ್ತು ಲೇಖನಿಯಾಗಿಸಿಕೊಂಡು ರಕ್ತ

ದಲ್ಲಿಯೇ ಅದ್ದಿ ಅದ್ದಿ ಮನಃಪಟಲದ ಮೇಲೆ ಅಚ್ಚಳಿಯದಂತೆ ಒತ್ತಿ ಒತ್ತಿ ಬರೆಯಬಲ್ಲೆ. ಆದರೆ ?

"ವಿಜಯಾ....

"ಏ ವಿಜಯಾ....

"ಏನಣ್ಣ ?" ನನ್ನ ಮಂಡಿಗೆ ಒರಗಿಕೊಂಡ ಆರು ವರ್ಷದ ಮುದ್ದು ತಂಗಿ ವಿಜಯ ಕೇಳಿದಳು. ಮಮತೆಯಿಂದ ತಲೆ ಸವರಿದೆ. ಥತ್, ಕಣ್ಣಿನಲ್ಲಿ ನೀರು ಬರುತ್ತಿದೆ. ಬೇಡವೆಂದರೂ ಬರುತ್ತಿದೆ.

"ವಿಜಯಾ....

"ಏನಣ್ಣ ?"

"ತಗೋ, ಈ ಕಾಗದಗಳನ್ನು. ತಗೊಂಡುಹೋಗಿ ಪುಸ್ತಕ ಹೊಲಿದುಕೊ. ಈ ಪೆನ್ನು ತಗೊಂಡು ಹೋಗು."

"ಯಾಕೆ ಸುಮ್ಮನಿದ್ದೀಯ ? ತಗೊಂಡು ಹೋಗು."

"ನಾ ತಗೊಂಡು ಹೋದರೆ ನಿನಗೆ ಕತೆ ಬರೆಯ್ಯೋಕ್ಕೆ ?"

ಮುದ್ದು, ಜಾಣೆ, ಏನು ಅರಿಯಳು. ನನ್ನ ಮನದ ಹಾಲಹಲ ಅವಳಿಗೆ ಅರ್ಥವಾಗುವಂತಿಲ್ಲ.

ತುಂಬು ಬಟ್ಟಲಲ್ಲಿ ಅವಳ ಕಣ್ಣು ಪಳ ಪಳ ಹೊಳೆಯತೊಡಗಿದೆ. ತನ್ನ ಮೆದುಗಲ್ಲವನ್ನು ನನ್ನ ಮಂಡಿಯ ಮೇಲೆ ಊರಿದ್ದಾಳೆ.

"ತಗೊಂಡು ಹೋಗಿ, ಪುಸ್ತಕ ಹೊಲೆದುಕೋ ಪುಟ್ಟ"

"ನಿನಗೆ ?"

"ನಾನಿನ್ನು ಬರೆಯುವುದಿಲ್ಲ"

"ಯಾಕಣ್ಣ ?"

"ಏನು ಹೇಳಲಿ ? ನನ್ನ ಸ್ಫೂರ್ತಿದೇವತೆ ಬಾಡಿಹೋದಳು ಎನ್ನಲೆ ? ಮನದಲ್ಲಿ ಮೂಡುವ ಕಲ್ಪನೆಗೆ ಬರಹದಲ್ಲಿ ಚಿತ್ರಿಸಲು ಶಬ್ಧ ಸಾಲದು ಎನ್ನಲೇ ? ಇಲ್ಲ, ಬರೆಯುವುದೆಲ್ಲಾ ಮುಗಿಯಿತು ಎಂದುಬಿಡಲೇ ? ಏನು ಹೇಳಲಿ ?

"ತಗೊಂಡು ಹೋಗು ಪುಟ್ಟ."

ಕೆಲವೊಮ್ಮೆ ಎಲ್ಲವೂ ಪ್ರತಿಕೂಲವಾಗಿಬಿಡುತ್ತದೆ. ಅಷ್ಟು ಹೊತ್ತಿನಿಂದ ಪ್ರಯತ್ನಿಸಿದರೂ ನಿಲ್ಲಬಾರದೆ ಕಣ್ಣೀರು ? ನಿಲ್ಲುವುದಿಲ್ಲ. ಯಾವುದೂ ನಮ್ಮ ಹಿಡಿತದಲ್ಲಿ ಇಲ್ಲ. ಒರಸಿಕೊಳ್ಳಬಹುದು. ಆದರೆ ಮತ್ತೆ ಬಂದರೆ ?

"ಯಾಕಣ್ಣ ಅಳ್ತೀಯಾ?" ಅಯ್ಯೋ, ಎಂತಹ ಕೆಲಸ ಆಗಿಹೋಯಿತು. ಅವಳ ತುಂಬುಗಣ್ಣಿನಲ್ಲಿ ನೀರು ಇಳಿಯತೊಡಗಿದೆ. ಮಂಡಿಯನ್ನು ಪುಟ್ಟ ಕೈಯಲ್ಲಿ ಬಲವಾಗಿ ಹಿಡಿದುಕೊಂಡು ಅಳುತ್ತಿದ್ದಾಳೆ. ಪಾಪ ಮುದ್ದು ಜೀವ, ಬೆಣ್ಣೆಯಂತಹ ಹೃದಯ. ನಕ್ಕರೆ ಅವಳೂ ನಕ್ಕುಬಿಡುತ್ತಾಳೆ. ಏನು ಬೇಕಾದರೂ ಆಗಬಹುದು. ನನ್ನ ವಿಜಯ, ಮುದ್ದು ವಿಜಯಳ ಕಣ್ಣಿನಲ್ಲಿ ನೀರು ಬಂದರೆ ಮಾತ್ರ ನನಗೆ ಸಹಿಸುವುದಿಲ್ಲ. ಇವಳನ್ನು ಹೇಗೆ ಸಮಾಧಾನಪಡಿಸಲಿ ? ಮೊದಲು ನಾನು ಕಣ್ಣು ಒರಸಿಕೊಳ್ಳಬೇಕು. ಪುಟ್ಟಿ, ನೋಡು....ಹ್ಹೆ....ಹ್ಹೆ....ನಗುತ್ತಿದ್ದೇನೆ.

ನನ್ನ ನಗು ಕೇಳಿದ ವಿಜಯ ಕತ್ತೆತ್ತಿ ನೋಡುತ್ತಾಳೆ.

"ಹೇ ಕಳ್ಳ ! ನಗ್ತೀಯಾ ? ಅತ್ತಹಾಗೆ ಮಾಡಿ." ಇದ್ದಕ್ಕಿದ್ದ ಹಾಗೆಯೇ ಅವಳ ಕಣ್ಣೀರು ನಿಂತುಬಿಡುತ್ತದೆ. ಪುಟ್ಟದಾಗಿ ನಗುತ್ತಾಳೆ. ಆದರೂ ಮಾಮೂಲಾಗಿ ಕೆನ್ನೆಯಲ್ಲಿ ಮುದ್ದಾಗಿ ಕುಳಿ ಬೀಳುತ್ತದೆ.

"ಈಗ ಒಳಗೆ ಹೋಗು ಪುಟ್ಟಿ."

ಕೈ ಬಿಡಿಸಿಕೊಂಡು ಹೊರಟ ಅವಳನ್ನು ಮತ್ತೆ ಕರೆದು ಮೇಜಿನ ಮೇಲಿದ್ದ ಎಲ್ಲಾ ಕಾಗದಗಳನ್ನು ಜೋಡಿಸಿ ಒಟ್ಟುಮಾಡಿ, ಜೀವನದ ಹಳೆಯ ಸಂಗಾತಿ ಲೇಖನಿಯನ್ನು ಅವಳ ಕೈಗಿಡುತ್ತಾ ಹೇಳಿದೆ. 'ತಗೊಂಡು ಹೋಗು.'

o o o o

ನನ್ನ ಮುಂದೆ ಮರುಳುಮಾಡುವ ಎರಡು ಸಾಧನಗಳು ಇಲ್ಲವಾಗಿವೆ. ವಿಜಯ ಅವನ್ನು ತೆಗೆದುಕೊಂಡು ಹೋಗಿ ಶ್ರೀನಿವಾಸನೊಡನೆ ಚರ್ಚೆ ಮಾಡಿ ಕೊಟ್ಟು ಕಸಿದುಕೊಂಡು ಪುಸ್ತಕ ಹೊಲೆಸಿಕೊಂಡಿರಬೇಕು. ಹೊಸ

ಪುಸ್ತಕ ಸಿಕ್ಕಿತೆನ್ನುವ ಸಂತೋಷದಲ್ಲಿ ಇಪ್ಪತ್ತರವರೆಗೂ ಮಗ್ಗಿಯು ಬರೆಯಬಹುದು.

"ಸುಧಾ ..." ದೂರದಲ್ಲಿ, ಬಹು ದೂರದಲ್ಲಿ ಯಾರನ್ನೋ ಯಾರೋ ಕೂಗುತ್ತಿರುವಂತಿದೆ. ಕೂಗಿದ್ದು ಯಾರೋ ಯಾರನ್ನೋ. ನಾನೇಕೆ ಅತ್ತ ಗಮನ ಕೊಡಬೇಕು ?

ಸಧ್ಯ, ಒಂದುಹೊರೆಕಮ್ಮಿ ಆದಂತೆ ಆಯಿತು. ಇನ್ನು ಬರೆಯಲಾರೆ. ಬರೆಯಲು ಬೇಕಾದ ಸಾಧನವೇ ಇಲ್ಲವಾದಾಗ ಏನು ಬರೆಯಲಿ? ಮನಸ್ಸು ದೇಹ ಒಂದು ಸ್ಥಿಮಿತಕ್ಕೆ ಬರಬಹುದು.
ಲಾರೆ. ಬರೆಯಲು ಬೇಕಾದ ಸಾಧನವೇ ಇಲ್ಲವಾದಾಗ ನನು ಬರೆಯಲಿ ? ಮನಸ್ಸು ದೇಹ ಒಂದಿ ಸ್ಥಿಮಿತಕ್ಕೆ ಬರಬಹುದು.

"ಸುಧಾ"—ಇಲ್ಲಿ ಹತ್ತಿರದಲ್ಲಿಯೇ ಯಾರೋ ಕೂಗುತ್ತಿದ್ದಾರೆ. ಹತ್ತಿರದಲ್ಲಿರಲಿ, ದೂರದಲ್ಲಿರಲಿ, ನನಗೆ ಸಂಬಂಧಪಡದ ಮೇಲೆ ನಾನೇಕೆ ಅತ್ತ ಗಮನ ಕೊಡಬೇಕು ?

"ಓ ಸುಧಾ...." ಅಯ್ಯೋ. ಎಲ್ಲಿಯು ಅಲ್ಲ, ಇಲ್ಲೆ ನನ್ನ ಅಂತರಾಳದಲ್ಲಿಯೆ ಆ ಹೆಸರು ಪ್ರತಿ ಧ್ವನಿಸಿಗೊಳ್ಳುತ್ತಿದೆ. ಮರೆಯಲು ಎಷ್ಟೆಷ್ಟು ಪ್ರಯತ್ನಿಸುತ್ತೇನೋ, ಅಷ್ಟು ಪುಟಗೊಳ್ಳುತ್ತದೆ. ನೀರಿಗೆ ಕಲ್ಲು ಹಾಕಿದಂತೆ. ಆ ಹೆಸರು ಅಂತರಾಳದಲ್ಲಿ ಪ್ರತಿಧ್ವನಿಸಿಗೊಳ್ಳುತ್ತದೆ. ನೆನಪು ತರಂಗ ರಂಗವಾಗಿ ಮೂಡುತ್ತದೆ.

ಬೇಡ. ಅವು ಮತ್ತೆ ಮರುಕಳಿಸಬಾರದು ಅದರಿಂದ ಜರ್ಝರಿತವಾಗಿಬಿಡುತ್ತೇನೆ. ಅಸಹಾಯಕತೆಯಿಂದ ಒರಲಬೇಕಾತ್ತದೆ.

"ಮತ್ತೇನು ಬರೆಯುತ್ತಿದ್ದೀಯೆ ?"

ಬೆನ್ನ ಹಿಂದೆ ನಿಂತು ಹೆಗಲಮೇಲೆ ಬಾಗಿ ಕೇಳಿದ ಧ್ವನಿ. ತಿರುಗಿ ನೋಡಿ ಅರಿಯಬೇಕಾದ ಅವಶ್ಯಕತೆಯಿಲ್ಲ. ನನ್ನ ಹೆಗಲ ಮೇಲೆ ಬಿದ್ದ ನೀಳ ಕೇಶರಾಶಿಯೇ ಹೇಳುತ್ತದೆ. ಆದರೂ ತಿರುಗಿದೆ.

"ಬಹು ದಿನವಾಯಿತಲ್ಲ ಸುಧಾ ನಿನ್ನನ್ನು ನೋಡಿ: ಇತ್ತೀಚೆಗೆ ಬರುವುದೇ ಬಿಟ್ಟುಬಿಟ್ಟೆಯಲ್ಲ. ಕೋಪವೇನು ?" ಬರೆಯುತ್ತಿದ್ದುದನ್ನು ಹಾಗೆಯೆ ಪಕ್ಕಕ್ಕೆ ಸರಿಸಿ ಕುರ್ಚಿಯಲ್ಲಿ ಕೂರಲು ತೆರವು ಮಾಡಿ ಕೊಟ್ಟೆ.

"ಏಳಬೇಡ. ನೀನು ಬರೆಯುತ್ತಿರು. ಅದನ್ನು ನೋಡಿಯೇ ನನಗೆ ಸಂತೋಷವಾಗುತ್ತದೆ."

"ನೀನು ಎದುರುಗಿದ್ದರೆ ಕೈ ಒಡ್ಡುವುದೇ ಇಲ್ಲ. ನೀನು ಅತ್ತ ಹೋಗುತ್ತಲೇ ನಿನ್ನ ಪ್ರೇಮದ ಛಾಯೆಯಿಲ್ಲಿ ಏನೆಲ್ಲಾ ಬರೆದು ಬಿಡುತ್ತೇನೆ."

"ನನಗಿಂತ ನನ್ನ ಛಾಯೆಯೇ ನಿನಗೆ ಪ್ರಧಾನವಾಯಿತೇನೊ ?" ಜಡೆಯ ತುದಿಯಲ್ಲಿ ಕೆನ್ನೆಗೆ ಬಾರಿಸಿದಳು ಕೆನ್ನೆ ಬಾತುಕೊಂಡಿತಲ್ಲ. ಊದಿ ಊದಿ ಊರವುಂದಲ ಅಂಜನೇಯ ಮಾದರಿಗೆ ತಿರುಗಿಬಿಡಬಹುದು. ಅವಳ ಪ್ರೇಮದಲ್ಲಿ ಮಗುವಾಗಿಬಿಡುತ್ತೇನೆ. ಮಮತೆಯಿಂದ ಕೆನ್ನೆ ಸವರುತ್ತಿದ್ದಾಳೆ.

"ಇತ್ತೀಚೆಗೆ ಬಹು ಸೊರಗಿ ಬಿಟ್ಟೆ. ಯಾಕೆ ಮನಸ್ಸಿಗೇನಾದರೂ ಚಿಂತೆಯೇ ?"

"ಮೊದಲು ಹೇಳು ಇಷ್ಟು ದಿನ ನೀನು ಯಾಕೆ ಬರಲಿಲ್ಲ ? ಆಮೇಲೆ ಮುಂದಿನ ಮಾತು."

"ಇದೇ ಕಡೇ ಸಾರಿ ಇಲ್ಲಿಗೆ ಬರೋದು. ಮುಂದೆ ಬರೋದಕ್ಕೆ ಆಗುತ್ತೋ ಇಲ್ಲವೋ...."

"ಏನಂದೆ ?" ಬೆಚ್ಚಿ ಬಿದ್ದೆ.

"ಭಾವ ಏನಾದರೂ ಹೋಗಬೇಡ ಅಂದರೇನು ?"

"ಛೀ ಹುಚ್ಚಪ್ಪ ! ಅದಕ್ಕಲ್ಲ, ಆದರೂ ಬರೋಕಾಗೊಲ್ಲ."

"ಯಾಕೆ ಅಂತ ಹೇಳ್ತೀಯಾ, ಇಲ್ಲಾ ? ಮೇಲೆದ್ದೆ."

"ದಮ್ಮಯ್ಯ, ಬಲವಂತಮಾಡಬೇಡ. ಮತ್ತೆ ನಾನೇ ಹೇಳುತ್ತೇನೆ. ನಿನಗಲ್ಲದೆ ಮತ್ತಾರಿಗೆ ಹೇಳಲಿ ? ಖಚಿತವಾಗದೆ ಹೇಳಬಾರದು ! ಸರಿ, ಎಂದು ಸುಮ್ಮನಾದೆ.

ಭ್ರಮೆ ಯಾವ ರೂಪದಲ್ಲಿ ಬಂದು ಕಾಡುತ್ತದೋ ಬಲ್ಲವರಾರು ? ಯಾವ ಜನ್ಮದ ಋಣಾನುಬಂಧ ನನಗೂ ಈ ಸುಧೆಗೂ ? ಒಡಹುಟ್ಟಿದವಳಲ್ಲ. ಯಾವ ಬಾದರಾಯಣನ ನಂಟೂ ಅಲ್ಲ. ಬಹು ವರ್ಷಗಳ ಪರಿಚಯವಂತೂ ಖಂಡಿತ ಅಲ್ಲ. ಇಲ್ಲ, ತಪ್ಪಿ ಬಿಟ್ಟೆ, ಜನ್ಮ ಜನ್ಮಗಳ ಹೃದಯದ ಹಾಸುಹೊಕ್ಕು. ಕಂಡದ್ದು ಎರಡು ವರ್ಷಗಳ ಹಿಂದೆ. ಅವಳ

ಪರಿಚಯ ಸ್ನೇಹ ಹೇಗೆ ಆಯಿತೋ ಅರಿಯೆ. ಎಲ್ಲಾ ಮುಜುಲು ಮುಜುಲು. ಸ್ಪಷ್ಟವಾಗಿಬಿಡಿಸಿ ತೋರಿಸುವಷ್ಟು ನಿಚ್ಛಳವಲ್ಲ. ನಿಚ್ಛಳವಾಗಿ ಬಿಡಿಸಿ ತೋರಿಸಲು ಇವತ್ತು ನಿನ್ನೆಯದೇನು ? ಆಗಲೇ ಹೇಳಿದೆ ಜನ್ಮ ಜನ್ಮಗಳ ಹೃದಯದ ಹಾಸುಹೊಕ್ಕು.

ನಾನು ಬರೆಯುದೆಲ್ಲವನ್ನೂ ಓದುತ್ತಾಳೆ. ದುಂಡಗೆ ಬರೆದುಕೊಡುತ್ತಾಳೆ. ಪತ್ರಿಕೆಗೆ ಹೋಗಿ ಅಚ್ಚಾದ ಮೇಲೆ ಮತ್ತೆ ಮತ್ತೆ ಓದುತ್ತಾಳೆ. ಆ ಪತ್ರಿಕೆ ಭದ್ರವಾಗಿರಿಸಿಕೊಳ್ಳುತ್ತಾಳೆ.

ದಿನಕ್ಕೊಮ್ಮೆಯಾದರೂ ನಾನು ಅವಳ ಮನೆಗೆ ಹೋಗಲೇಬೇಕು. ನನಗಾಗಿ ಕಾಯುತ್ತಿರುತ್ತಾಳೆ. ಒಂದು ಲೋಟ ಹಾಲಿಟ್ಟಿರುತ್ತಾಳೆ.

"ಅಕ್ಕ ನನಗೀ ಹಾಲು ಬೇಡ ?"

ಛೀ, ಬೇಡ ಅನ್ನಬಾರದು ಕುಡಿ." ನನ್ನ ಉದ್ದನೆಯ ಗುಂಗುರ ಕೂದಲಲ್ಲಿ ಕೈ ಆಡಿಸುತ್ತಾ ಹೇಳುತ್ತಾಳೆ.

"ನನಗೆ ಕಾಫಿ ಬೇಕು,"

"ಹಾಲು ಕುಡಿ. ಕಾಫಿ ಮಾಡಿ ತರ್ತೀನಿ." ಹೋಗುವುದರಲ್ಲಿ ಕಾಫಿ ಸಿದ್ಧಮಾಡಿಕೊಡುತ್ತಾಳೆ. ಅವಳು ಕೊಡುವ ಕಾಫಿ ಬಹಳ ಸವಿ. ಬಹಳ ಹೊತ್ತು ಅದರ ಕಂಪು ಉಳಿಯುತ್ತದೆ.

"ನೋಡಿಂದ್ರೆ, ನಮ್ಮ ರಂಗಣ್ಣನ ಕತೆ ಈ ಪತ್ರಿಕೆಯಲ್ಲಿ ಪ್ರಕಟವಾಗಿದೆ ಪತ್ರಿಕೆಯನ್ನು ಗಂಡನಿಗೆ ತೋರಿಸುತ್ತಾಳೆ. ನಾನು ಹೋಗಿಬಿಟ್ಟರೆ ಸಾಕು. ಅವಳಿಗೆ ಇಲ್ಲದ ಶಕ್ತಿ ಬಂದು ಬಿಡುತ್ತದೆ. ಎಲ್ಲಾ ಕೆಲಸವನ್ನು ಸರಸರ ಮಾಡಿ ಮುಗಿಸಿಬಿಡುತ್ತಾಳೆ.

ನನಗೂ ಅಷ್ಟೆ. ಅವಳಲ್ಲಿಗೆ ಹೋಗುವುದೆಂದರೆ ತಾಯಿ ಮಡಲಿನಲ್ಲಿ ಆಡಿದಂತೆ. ಯಾವ ಸಂಕೋಚವೂ ಇಲ್ಲ. ನನ್ನ ಎಲ್ಲಾ ಸುಖ ದುಃಖಗಳನ್ನು ಅವಳ ಮುಂದೆ ಬಿಚ್ಚು ಮನಸಿನಲ್ಲಿ ಇಟ್ಟುಬಿಡುತ್ತೇನೆ. ನಾನು ಅತ್ತರೆ ಅವಳು ಅಳುತ್ತಾಳೆ. ನಾನು ನಕ್ಕರೆ ಅವಳೂ ನಗುತ್ತಾಳೆ. ನಮ್ಮ ಪ್ರೇಮದ ಮುಂದೆ ಸಮಾಜದ ಯಾವ ಕಟ್ಟುಪಾಡು ಅಡ್ಡಿಪಡಿಸಲಾರವು. ಅವರೂ ಅಷ್ಟೆ, ನನ್ನ ಭಾವ. ನಮ್ಮ ಮನಸ್ಸಿನ ತುಡಿತ ಚೆನ್ನಾಗಿ ಅರ್ಥ

ಮಾಡಿಕೊಂಡವರು. ಯಾವುದಕ್ಕೂ ಅಡ್ಡಿಪಡಿಸುವರಲ್ಲ. ಅವರಿಗೆ ಅಕ್ಕ ನಗು ನಗುತ್ತಾ ಇದ್ದುಬಿಟ್ಟರೆ ತೀರಿತು, ಸಮಾಧಾನವಾಗುತ್ತದೆ

ಸಂಜೆ ಕಾಲೇಜು ಮುಗಿಸಿಕೊಂಡು ಸುಧಾಳ ಮನೆಗೆ ನೇರವಾಗಿ ಹೋಗುತ್ತೇನೆ.

"ಸುಧಾ...." ಉತ್ತರವಿಲ್ಲ. ಒಳಗೆಲ್ಲೋ ಕೆಲಸ ಮಾಡುತ್ತಿರಬಹುದು. ಬಾಗಿಲು ನೂಕಿದೆ. ಈ ಅಕ್ಕನಿಗೆ ಏನೂ ತೋಚುವುದೇ ಇಲ್ಲ. ಬಾಗಿಲ ಚಿಲಕ ಹಾಕಿಯೇ ಇಲ್ಲ. ಇವತ್ತು ಸುಮ್ಮನೆ ಬಿಡಬಾರದು. ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳಬೇಕು.

ಸಣ್ಣಗೆ ನರಳುವ ಸದ್ದು. ಹೌದು ಅಕ್ಕನ ಧ್ವನಿ. ರೂಮಿನಲ್ಲಿ ಬಿಕ್ಕುತ್ತಿದ್ದಾಳೆ. ಧಾವಿಸಿದೆ. ಮಂಚದಲ್ಲಿಯ ದಿಂಬಿಗೆ ಮುಖ ಒತ್ತಿಬಿಟ್ಟಿದ್ದಾಳೆ.

ಒಂದು ಘಳಿಗೆ ಏನು ಮಾಡಲು ತೋರಲಿಲ್ಲ.

"ಸುಧಾ.... ಮಂಚದ ಮೇಲೆ ಕುಳಿತು ಅಕ್ಕನ ತಲೆ ಸವರಿದೆ. ಸುಧಾ ನಾನು ಬಂದಿದ್ದೇನೆ. ನನ್ನ ಮಾತು ಕೇಳಿಸಿರಬೇಕು. ತಕ್ಷಣ ಎದ್ದು ಕುಳಿತಳು. ಕಣ್ಣು ಒರೆಸಿಕೊಳ್ಳುತ್ತಾ ಹೇಳಿದಳು.

"ನಿದ್ದೆ ಮಾಡುತ್ತಿದ್ದೆ. ಯಾವಾಗ ಬಂದೆ ? ನಿಲ್ಲು. ಕಾಫಿಗೆ ನೀರು ಇಟ್ಟು ಬರುತ್ತೇನೆ. ಮಂಚದಿಂದ ಇಳಿಯುತೊಡಗಿದ್ದಳು. ಅವಳ ಕೈಯನ್ನು ಜಗ್ಗಿ ಹೇಳಿದೆ. "ಕಾಫಿ ಬೇಡ"

"ಹಾಲು ತರುತ್ತೀನಿ."

"ಹಾಲು ಬೇಡ. ಇನ್ನು ಮುಂದೆ ನಾನು ಒಂದು ಹನಿ ನೀರು ಸಹ ಕುಡಿಯುವುದಿಲ್ಲ."

"ಥೂ. ಬಿಡ್ತು ಅನ್ನು. ಏನು ಮಾತಾಡ್ತೀಯಪ್ಪ." ನನ್ನ ಬಾಯ ಮೇಲೆ ಕೈ ಇಟ್ಟಳು. ಅವಳ ಕೈ ತೆಗೆದು ಮತ್ತೆ ಹೇಳಿದೆ.

"ನಾನಿನ್ನು ಹೋಗುತ್ತೇನೆ." ಎಳ ಹೊರಟೆ.

"ನಿನಗೇನಾಗಿದೆ ಇವತ್ತು ? ಈ ರೀತಿ ಆಡುತ್ತೀಯಲ್ಲ ?" ಅವಳಿಗೆ ನನ್ನ ನಡವಳಿಕೆಯಿಂದ ಆದ ದುಃಖ ಅಷ್ಟಿಷ್ಟಲ್ಲ. ಅಳತೊಡಗಿದಳು. ನನ್ನ ಹೃದಯಕ್ಕೆ ಬೆಂಕಿ ಹತ್ತಿಕೊಂಡ ಅನುಭವ. ನನ್ನ ಸುಧಾ ಅಳಬಾರದು.

ಅದನ್ನು ನೋಡಲು ನನಗೆ ಆಗುವುದಿಲ್ಲ. ಅವಳ ಕಣ್ಣೀರನ್ನು ಬೆರಳಿಲ್ಲಿ ಮಿಡಿಯುತ್ತಾ ಹೇಳಿದೆ.

"ನನಗೆ ನೀನೇನಾದರೂ ಮರೆಮಾಚಿದರೆ. ನಾನಿನ್ನು ಇಲ್ಲಿಗೆ ಬರುವುದೇ ಇಲ್ಲ."

"ನಿನಗೇನು ಮರೆಮಾಚಿದ್ದೇನೆ ?"

"ನಾನು ಬರುವಾಗ ಅಳುತ್ತಿದ್ದೆ ?"

"ಇಲ್ಲ, ನಿದ್ದೆ ಮಾಡುತ್ತಿದ್ದೆ."

"ಮತ್ತೆ ಸುಳ್ಳು ?" ಮಂಚದಿಂದ ಎದ್ದು ನಿಂತೆ.

"ಹೋಗಬೇಡ. ಹೇಳುತ್ತೇನೆ ಕೇಳು ಕೈ ಎಳೆದು ಮಂಚದ ಮೇಲೆ ಮತ್ತೆ ಕೂರಿಸಿಕೊಂಡಳು.

"ಕಾಫಿ ಮಾಡಿಕೊಂಡು ಬರಲಾ ?"

"ಬೇಡ. ಎಲ್ಲಾದರೂ ಹೊರಗಡೆ ಕುಡಿಯೋಣ. ನಡಿ. ಪಾರ್ಕಿಗೆ ಹೋಗಿಬರೋಣ."

ಆ ವಾತಾವರಣದಲ್ಲಿ ಅವಳು ಇರುವುದು ನನಗೆ ಸರಿತೋರಲಿಲ್ಲ. ಮರುಮಾತಿಲ್ಲದೆ ಮುಖ ತೊಳೆದು ಬರಲು ಹೋದಳು. ಏಕೆ ಅಳುತ್ತಿದ್ದಿರ ಬಹುದು ? ಭಾವ ಏನಾದರೂ ಗದರಿಕೊಂಡರೆ ? ಸಾಧ್ಯವೇ ಇಲ್ಲ ಅವರ ಮನಸ್ಸು ನನಗೆ ಚೆನ್ನಾಗಿ ತಿಳಿದಿದೆ. ಅವರು ಗದರಿಕೊಳ್ಳಲು ಸಾಧ್ಯವೇ ಇಲ್ಲ. ಸುಧಾ ನಗು ನಗುತ್ತಾ ಇದ್ದುಬಿಟ್ಟರೆ ಅದನ್ನು ನೋಡಿಯೇ ಆನಂದಪಡುತ್ತಾರೆ. ಹಾಗಾದರೆ ಏನು ವಿಷಯ ?

"ಹೋಗೋಣ...."

ಭಲಾ ! ಹತ್ತು ನಿಮಿಷಗಳ ಹಿಂದೆ ಸುಧಾ ಅಳುತ್ತಿದ್ದಳೆ ? ಇಲ್ಲ ಇಲ್ಲ ಎಲ್ಲಾ ಸುಳ್ಳು. ಮುಖ ಸ್ವಚ್ಛವಾಗಿದೆ. ಅದೇ ದುಂಡುಗಿನ ಪುಟ್ಟ ಕುಂಕುಮ ಚೆನ್ನಿಗೆ ಸಿಕ್ಕದೆ ಮೇಲೆ ಜೋಲಿ ಹೊಡೆದ ಕೂದಲು. ಕಣ್ಣಿನಲ್ಲಿ ಮಮತೆಯ ನೆರಳು.

ಇಬ್ಬರೂ ಹೊರ ಬಂದು ಪಾರ್ಕಿನತ್ತ ಹೊರಟೆವು. ದಾರಿ ಮೌನವಾಗಿ ಸಾಗಿತ್ತು. ಪಾರ್ಕಿನ ಕ್ಯಾಂಟೀನಿನಲ್ಲಿ ಕಾಫಿ ಕುಡಿದು, ಹುಲ್ಲು ಹಾಸಿನ ಮೇಲೆ ಕುಳಿತೆವು.

"ಈಗ ಹೇಳು ಯಾಕೆ ಅಳುತ್ತಿದ್ದೆ ?"

ನನ್ನ ಮಾತು ಕೇಳಿದಂತೆಯೇ ಇಲ್ಲ. ಸುಧಾಳ ದೃಷ್ಟಿ ದೂರದಲ್ಲಿಯ ಮರದ ಮೇಲೆ ನಾಟಿದೆ. ಅತ್ತ ನೋಡಿದೆ. ಕೊಂಬೆಯ ಮೇಲೆ ಕುಳಿತ್ತಿದ್ದ ಮರಿ ಕಾಗೆಗೆ, ದೊಡ್ಡ ಕಾಗೆ ಕೊಕ್ಕಿನಿಂದ ಏನನ್ನೋ ತಿನ್ನಿಸುತ್ತಿದೆ.... ನೋಡುತ್ತಿದ್ದ ಅಕ್ಕನ ರಪ್ಪೆಗಳು ಪಟ ಪಟ ಹೊಡೆದುಕೊಂಡವು. ಕಣ್ಣೀರು ಹನಿಹನಿಯಾಗಿ ಇಳಿಯ ತೊಡಗಿತು.

"ಸುಧಾ...." ಸ್ವಲ್ಪ ಗಟ್ಟಿಯಾಗಿ ಕೂಗಿದೆ. ಬೆಚ್ಚಿಬಿದ್ದಳು. ಅತ್ತ ಮುಖಮಾಡಿ ಕಣ್ಣೀರು ಒರೆಸಿ ಕೊಂಡಳು.

ಈಗ ಮತ್ತೆ ನಾನು ಅತ್ತದ್ದೇಕೆ ಎಂದು ಪ್ರಶ್ನಿಸಬೇಕಾದ ಅಗತ್ಯವಿಲ್ಲ. ಅವಳು ಯಾವುದಕ್ಕೆ ಹಾತೊರೆಯುತ್ತಿದ್ದಾಳೆ ಎಂದು ನನಗೆ ಅರ್ಥವಾಗಿದೆ. ಮತ್ತೆ ಅದೇ ಪ್ರಶ್ನೆ ಕೇಳಿ ಅವಳ ಉದ್ವಿಗ್ನ ಮನಸ್ಸನ್ನು ನೋಯಿಸುವುದು ಸರಿಯಲ್ಲವೆನಿಸಿತು.

ಈ ಚಿಕ್ಕ ಸಂಗತಿಗೆಲ್ಲಾ ಅಳಬಾರದು ಸುಧಾ. ಏನು ಮುದುಕಿಯಾಗಿ ಬಿಟ್ಟೆಯೇನು ? ನೋಡುತ್ತಿರು ಮುಂದಿನ ವರ್ಷ ನೀನು ಅಮ್ಮನಾಗಿ ಬಿಡುವೆ. ನನಗೆ ಮತ್ತೊಂದು ಪುಟ್ಟ ಸುಧಾ....ಹ್ಹೊ....ಹ್ಹೊ...." ಲೊಟ್ಟೆ ಹಾಕಿದೆ.

"ನಿಜವಾಗಿಯೂ ?" ನನ್ನ ಕೈಯನ್ನು ಬಲವಾಗಿ ಹಿಡಿದು ಕೇಳಿದಳು. ಅವಳ ಕಣ್ಣುಗಳು ತುಂಬಿ ನಿಂತಿದ್ದವು.

"ಸತ್ಯವಾಗಿಯೂ ಆಗುತ್ತದೆ. ಆದರೆ, ಸುಧಾ ಅಳಬಾರದು."

ಮಮತೆ, ಪ್ರೇಮ ಮಾತನ್ನು ಮರೆಸಿತು. ಮತ್ತೆ ಮತ್ತೆ ನನ್ನ ಕೈಗೆ ಮುತ್ತಿಕ್ಕಿದಳು.

ಬರಹ, ಕಾಲೇಜು ಇವುಗಳ ಜಂಜಾಟದಲ್ಲಿ ಕೆಲವೊಮ್ಮೆ ಸುಧಾಳನ್ನು ನೋಡಲು ಆಗುವುದೇ ಇಲ್ಲ. ಮನಸ್ಸೆಲ್ಲಾ ಅವಳ ಮಡಿಲಿನಲ್ಲಿಯೇ. ಎರಡು ಮೂರು ದಿನವಾಗಿಬಿಟ್ಟರೆ ಅವಳೇ ಹುಡುಕಿಕೊಂಡು ಬರುತ್ತಾಳೆ.

"ಆರೋಗ್ಯದ ಕಡೆ ಗಮನ ಕೊಡಬೇಕಪ್ಪ."

"ಆಗಲಿ ಅಕ್ಕ," ಭೇಟಿಯಾಗಿ ಹಲವು ವರ್ಷಗಳಾದಂತೆ. ಕಳಕಳಿಯಿಂದ ವಿಚಾರಿಸುತ್ತಾಳೆ.

"ರಾತ್ರಿ ಬಹಳ ಹೊತ್ತು ಓದುತ್ತಾ ಕೂರಬಾರದು."

"ಇಲ್ಲವಲ್ಲ. ಒಂಬತ್ತು ಗಂಟೆಗೆಲ್ಲಾ ಊಟ ಹೊಡೆದು ಕಾಲು ಚಾಚಿ ಮಲಗಿರುತ್ತೇನೆ."

ಈ ಕತೆಗಾರರನ್ನು ನಂಬಬಾರದು. ಸುಳ್ಳು ಹೇಳುವುದರಲ್ಲಿ ನಿಪುಣರು." ಕೆನ್ನೆಗೆ ಮಮತೆಯ ಪೆಟ್ಟು. ಅವಳ ಸ್ಪರ್ಶವಾದರೆ ಸಾಕು. ಇಡೀ ದಿನದ ಆಯಾಸ ಮಂಗಮಾಯ.

ಒಂದು ಬೆಳಿಗ್ಗೆ ಭಾವಯ್ಯ ಬಂದು, ಸುಧಾ ಕರೆಯುತ್ತಿರುವುದಾಗಿ ಹೇಳಿ ಹೋದರು. ಏಕೆಂದು ಕೇಳಿದರೂ ಹೇಳದೆ ನಗುತ್ತಲೇ ನಡೆದು ಬಿಟ್ಟರು. ಬರೆಯುತ್ತಿದ್ದುದನ್ನು ಬಿಟ್ಟು ಹಾಗೆಯೇ ಸುಧಾಳಲ್ಲಿಗೆ ಹೊರಟೆ

"ಬಾ...." ಮಂಚದ ಮೇಲೆ ಮಲಗಿದ್ದ ಸುಧಾ ಕರೆದಳು. ಅವಳ ಪಕ್ಕದಲ್ಲಿಯೇ ಹೋಗಿ ಕುಳಿತೆ.

"ಎಲ್ಲಿ ಸ್ವಲ್ಪ 'ಆ' ಅನ್ನು. ಹಾಗೆ." ಒಂದು ಚೂರು ಮಿಠಾಯಿ ಬಾಯಿಗೆ ತುರುಕಿ ಕೈ ಎಳೆದು ಮುತ್ತಿಟ್ಟಳು. ಬಾಯಿಗೆ ತುರುಕಿದ ಮಿಠಾಯಿ ತಿಂದು ಕೇಳಿದೆ.

"ಏನಕ್ಕ ವಿಶೇಷ ?"

"ನಿನಗೆ ಪುಟ್ಟ ತಂಗಿ ಕೊಡಲೆ ?"

ಬಾಯಲ್ಲಿ ಹೇಳಲಾರೆ. ಬರೆದು ತೋರಿಸಲು ಪದ ಸಾಲದು. ಸುಧಾಳ ಮಾತು ಕೇಳಿ ಅಷ್ಟು ಆನಂದವಾಗಿಹೋಯಿತು. ಆನಂದದಿಂದ ಹೊಟ್ಟೆ ತುಂಬಿಬಂತು.

"ಎಲಾ ಕಳ್ಳಿ !" ಮೃದುವಾಗಿ ಕೆನ್ನೆ ಹಿಂಡಿದೆ. ಅವಳ ಮುಖದಲ್ಲಿ ಓಕುಳಿಯಾಡಿತ್ತು. ಸಧ್ಯದಲ್ಲೇ ಸುಧಾ ನನಗೊಂದು ಪುಟಾಣಿ ಕೊಡುತ್ತಾಳೆ.

"ಸುಧಾ ಮುಂದಿನ ತಿಂಗಳು ಮದರಾಸು, ಮುಂಬಯಿಗೆ ಪ್ರವಾಸ ಹೊರಡಬೇಕೆಂದಿದ್ದೇವೆ. ಹೋಗಿಬರಲೇ ?"

"ಯಾರ ಕೂಡ ?"

"ಕಾಲೇಜಿನವರೊಂದಿಗೆ."

"ಆಗಲಿ, ಹೋಗಿ ಬಾ, ಆದರೆ, ಬಂದ ತಕ್ಷಣ ನನ್ನ ಮೇಲೆ ಒಂದು ಕತೆ ಬರೆಯಬೇಕು ?"

ಅವಳನ್ನು ದಿಟ್ಟಿಸಿ ನೋಡಿದೆ. ತಮಾಷೆ ಮಾಡುತ್ತಿಲ್ಲ. ನಿಜವಾಗಿಯೂ ಕೇಳುತ್ತಿದ್ದಾಳೆ. ಈ ಅಕ್ಕ ಒಮ್ಮೊಮ್ಮೆ ಹುಚ್ಚು ಹುಚ್ಚಾಗಿ ಆಡಿಬಿಡುತ್ತಾಳೆ. ಅರ್ಥ ಮಾಡಿಕೊಳ್ಳುವುದೇ ಕಷ್ಟವಾಗಿಬಿಡುತ್ತದೆ.

"ಬರೆಯುವುದಿಲ್ಲವೆ ?"—ಮತ್ತೆ ಅಕ್ಕನ ಪ್ರಶ್ನೆ.

"ಬರೆಯುತ್ತೇನೆ. ಖಂಡಿತ ಬರೆಯುತ್ತೇನೆ."

ಕಾಲದ ಸೆಳವಿನಲ್ಲಿ ನಗ್ಗಿ ಹೋಗಿಬಿಡುತ್ತೇವೆ. ಕಣ್ಣು ಮುಚ್ಚಿ ಬಿಡುವುದರಲ್ಲಿ ಕಾಲ ಬಹು ದೂರ ಓಡಿಬಿಟ್ಟಿರುತ್ತದೆ. ಮುಂಬಾಯಿಗೆ ಪ್ರಯಾಣ ಬೆಳಸಬೇಕು. ಅಕ್ಕನನ್ನು ನೋಡಿಕೊಂಡು, ಹೇಳಿ ಬರಲು ಹೊರಟೆ,

"ಹೇಗಿದ್ದೀಯಾ ?" ನನ್ನ ಮುಖ ನೋಡುತ್ತಲೇ ಕೇಳಿದಳು.

"ನನಗೇನಾಗಿದೆ, ಕಲ್ಲುಗುಂಡಾಗಿದ್ದೇನೆ. ನೀನು ಹೇಗಿದ್ದೀಯಾ ?"

ತಂದಿದ್ದ ಮೋಸಂಬಿ ಅಕ್ಕನ ಕೈಗೆ ಕೊಟ್ಟೆ. ಒಂದನ್ನು ಪಕ್ಕದಲ್ಲಿಟ್ಟು ಕೊಂಡ ಅಕ್ಕ, ಮತ್ತೊಂದು ಸುಲಿದು ಎರಡು ತೊಳೆ ಬಿಡಿಸಿ ನನ್ನ ಬಾಯಿಗೆ ತುರುಕಿದಳು. ಸುಮ್ಮನೆ ಬಿಟ್ಟರೆ ಎಲ್ಲವನ್ನು ನನಗೆ ತಿನ್ನಿಸಿ ಬಿಡುತ್ತಾಳೆ. ಅವಳ ಕೈಯಿಂದ ಹಣ್ಣು ಕಿತ್ತುಕೊಂಡು ಬಿಡಿಸಿ, ನಾನೇ ಅವಳ ಬಾಯಿಗಿಟ್ಟೆ.

"ನಾನು ನಾಡದ್ದು ಮುಂಬಾಯಿಗೆ ಹೊರಡುತ್ತೇನೆ. ಒಂದು ತಿಂಗಳ ಪ್ರವಾಸ ಅಷ್ಟೆ. ಅಷ್ಟರಲ್ಲಿ ನೀನು ಮಗು ಎತ್ತಿಕೊರಡಿರಬೇಕು, ಆಂ ?"

"ಆಗಲಿ. ಹೋಗಿ ಬಾ. ಜೋಪಾನ" ತಲೆದಿಸೆಗೆ ಕೈಹಾಕಿ ನೂರರ ನೋಟು ತೆಗೆದು ನನ್ನತ್ತ ಚಾಚಿದಳು."

"ಬೇಡ ನನ್ನ ಹತ್ತಿರ ಬೇಕಾದಷ್ಟಿದೆ."

"ಇರಲಿ ತಗೋ."

ಮರುಮಾತಿಲ್ಲದೆ ತೆಗೆದುಕೊಂಡೆ. ಬೇಡ ಅಂದ ಮಾತ್ರಕ್ಕೆ ಬಿಡುವ ಆಸಾಮಿಯಲ್ಲ. ವೃಥ ಚರ್ಚೆ, ಅಷ್ಟೆ. ಈ ಹಣದ ಋಣ ಮನಸ್ಸು

ಮಾಡಿದರೆ ತೀರಿಸಬಲ್ಲೆ. ಆದರೆ, ಆದರೆ......ಇದರ ಹಿಂದೆ ಇರುವ ಪ್ರೇಮ ವಾತ್ಸಲ್ಯಕ್ಕೆ ?

"ಬಂದ ಮೇಲೆ ನನ್ನ ಮೇಲೆ ಕತೆ ಬರೆಯಬೇಕು."

—ನಕ್ಕು ಹೇಳಿದೆ, ಹುಟ್ಟುವ ಆ ಪುಟಾಣಿಯ ಮೇಲೂ ಬರೆಯುತ್ತೇನೆ.

० ० ० ०

ಪ್ರಯಾಣದ ಆಯಾಸ. ಹೊಸ ಗೆಳೆಯರೊಂದಿಗೆ ಮಾತುಕತೆ, ಮಧ್ಯೆ ಮಧ್ಯೆ ಉಪನ್ಯಾಸ. ಸುತ್ತುವುದು. ಮತ್ತೆ ಪ್ರಯಾಣ. ಈ ಗಡಿಬಿಡಿಯಲ್ಲಿ ಸುಧಾಳಿಗೆ ಪತ್ರ ಬರೆಯಬೇಕೆಂದರೂ ಆಗಲಿಲ್ಲ. ನನ್ನ ಸುಧಾಳ ಪ್ರೀತಿ ವಾತ್ಸಲ್ಯದ ಮುಂದೆ ಇವೆಲ್ಲಾ ಅಲ್ಪವಾಗಿ ಕಂಡು ಬಿಡುವುವು. ಇಷ್ಟು ದಿನ ಕಳೆದುದಾಯಿತು. ಇನ್ನೂ ಒಂದು ವಾರ ಹೇಗೆ ಕಳೆಯುವುದು ?

ಡಿಸೆಂಬರ್ ತಿಂಗಳು. ಚಳಿ ಜಾಸ್ತಿ. ಹೊರಡುವ ಹಿಂದಲ ದಿನ ಸುಧಾಳಿಗೂ, ಬಂದಿರುವ ಆ ಪುಟಾಣಿಗೂ ಸ್ವೆಟರ್ ತೆಗೆದುಕೊಂಡೆ. ನಾನು ಯಾವುದನ್ನು ಕೊಟ್ಟರೂ ಸರಿಯೇ ಅದನ್ನು ಮಮತೆಯಿಂದ ತೆಗೆದುಕೊಳ್ಳುತ್ತಾಳೆ.

ಪ್ರಯಾಣ, ಹೊಸ ವಾತಾವರಣ ಎಲ್ಲವೂ ಚೆನ್ನಾಗಿತ್ತು. ಆದರೂ ಅಕ್ಕನನ್ನು ಒಂದು ತಿಂಗಳು ನೋಡದೆ ಬಹಳ ಬೇಸರವಾಗಿತ್ತು. ಬಂದವನೇ ಹೋಲ್ಡಾಲ್ ಬಿಚ್ಚಿ ಸ್ವೆಟರ್ ತೆಗೆದುಕೊಂಡು ಓಡಿದೆ. ಸುಧಾಳಿಗೆ ಹಸಿರು ಎಂದರೆ ಪ್ರಾಣ. ಈ ಸ್ವೆಟರಿನ ಬಣ್ಣ ಒಪ್ಪಬಹುದು. ಪ್ರಯಾಣ ಹೇಗಿತ್ತು ? ಇಳಿದು ಬಿಟ್ಟೆಯಲ್ಲಾ ! ನನ್ನನ್ನು ನೋಡಿ ಇಲ್ಲದ ಚಿಂತೆ ಮಾಡಿಕೊಳ್ಳುತ್ತಾಳೆ.

ಬಾಗಿಲು ಹಾಕಿರಲಿಲ್ಲ. ನೂಕಿದೆ. ವರಾಂಡದಲ್ಲಿಯೇ ಭಾವ ಪತ್ರಿಕೆ ಓದುತ್ತಿದ್ದರು. ನನ್ನತ್ತ ನೋಡಿಯೂ ಅವರು ಮತ್ತೆ ಪತ್ರಿಕೆಯಲ್ಲಿ ಕಣ್ಣಾಲಿಸಿದರು.

"ಭಾವ, ಹೆಣ್ಣೊ, ಗಂಡೊ...."

ಅವರು ಹೇಳಲಿಲ್ಲ, ನನಗೆ ನಿಲ್ಲಲು ವ್ಯವಧಾನವೂ ಇಲ್ಲ, ರೂಮಿನೊಳಕ್ಕೆ ಓಡಿದೆ.

"ಸುಧಾ...." ಉತ್ತರವಿಲ್ಲ, ಮಲಗಿರಬೇಕು. ಕಿಟಕಿ ಬಾಗಿಲು ತೆಗೆದ, ಎಲ್ಲಿ ಸುಧಾ ? ತೊಟ್ಟಿಲು ? ಮಗು ? ಇಲ್ಲ, ಇದು ಯಾವುದು ಇಲ್ಲ. ಮಂಚದ ಮೇಲೆ ಹಾಸಿಗೆ ಸುರುಳಿ ಮಾತ್ರವಿದೆ. ಈಗ ಭಾವ ನನ್ನ ಹಿಂದೆ ಬಂದು ನಿಂತಿದ್ದರು.

"ಸುಧಾ ಎಲ್ಲಿ ?"

"ಅವರ ತುಟಿ ಅದುರತೊಡಗಿತ್ತು. ಅತ್ತ ಕೈ ತೋರಿಸಿದರು. ನೋಡಿದೆ ! ಅಲ್ಲಿ ಫೋಟೋ ಅಯ್ಯೋ ನನ್ನ ಮುದ್ದು ಸುಧಾ........ ಎಷ್ಟು ಹೊತ್ತು ? ನನ್ನ ಸುಧಾ ಬರಲಾರಳು. ಹೊಸ ಜೀವ ಕೊಡುವ ಹೋರಾಟದಲ್ಲಿ ಸೋತು ಹೋದಳಂತೆ. ಅಯ್ಯೋ, ನನಗೆ ಹೊಸದು ಇಲ್ಲ. ಹಳೆಯದೂ ಇಲ್ಲ.

ಕೈಯಲ್ಲಿದ್ದ ಸ್ವೆಟರ್ ಮಣಗಟ್ಟಲೆ ಭಾರವಾಗಿತ್ತು. ಯಾರಿಗಾಗಿ ತಂದಿದ್ದೆನೋ ಆ ವಸ್ತುವೇ ಇಲ್ಲದ ಮೇಲೆ ಇನ್ನು ಇದರಿಂದ ಪ್ರಯೋಜನ ವೇನು ? ಮೂಲೆಗೆಸೆದು ಎದ್ದು ನಿಂತೆ. ಹೃದಯ ಮರುಳುಗಾಡಿನಂತಾಗಿ ಹೋಯಿತು.

"ಭಾವಯ್ಯ ಇದನ್ನು ತಗೊಂಡು ಹೋಗ್ತೀನಿ"

ಉತ್ತರ ಕೊಡುವ ಮುನ್ನವೇ ಗೋಡೆಯಿಂದ ಅಕ್ಕನ ಫೋಟೊ ಕಳಚಿಕೊಂಡು ಹೊರ ನಡೆದೆ.

o o o o o o

ನಾನಿನ್ನು ಬರೆಯಲಾರೆ,

ಯಾವುದನ್ನು ಮಾಡಲು ಮನಸ್ಸೇ ಇಲ್ಲ, ಸುಧಾ ನನ್ನನ್ನು ಅನಾಥನನ್ನಾಗಿ ಮಾಡಿಬಿಟ್ಟಳು. ಇನ್ನು ಯಾರಿಗಾಗಿ ಬರೆಯಬೇಕು ?

ಭ್ರಮೆಯಾವ ರೂಪದಲ್ಲಿ ಬಂದು ಕಾಡುತ್ತದೋ ಬಲ್ಲವರಾರು !

ಯಾವ ಜನ್ಮದ ರುಣಾನುಬಂಧ ನನಗೂ ಈ ಸುಧೆಗೂ? ಒಡಹುಟ್ಟಿದವಳಲ್ಲ. ಯಾವ ಬಾದರಾಯಣ ನಂಟೂ ಅಲ್ಲ. ಬಹು ವರ್ಷಗಳ ಪರಿಚಯವಂತೂ ಖಂಡಿತ ಅಲ್ಲ. ಇಲ್ಲಿ ತಪ್ಪಿಬಿಟ್ಟೆ ಜನ್ಮ ಜನ್ಮಗಳ ಹೃದಯದ ಹಾಸುಹೊಕ್ಕು. ಕಂಡದ್ದು ಎರಡು ವರ್ಷಗಳ ಹಿಂದೆ,.ಅಷ್ಟೆ. ಅವಳ ಪರಿಚಯ, ಮೋಹ ಹೇಗೆ ಆಯಿತೋ ಅರಿಯೆ, ಎಲ್ಲಾ, ಮುಸುಕು, ಮುಸುಕು, ಸ್ಪಷ್ಟವಾಗಿ ಬಿಡಿಸಿ ತೋರಿಸಲು ಇಂದು ನಿನ್ನೆಯದೇನು? ಆಗಲೇ ಹೇಳಿದೆ. ಜನ್ಮ ಜನ್ಮಾಂತರದ ಹೃದಯಗಳ ಹಾಸುಹೊಕ್ಕು.

ನನ್ನ ಸುಧಾಳನ್ನು ಮುಂದೆ ಕೂರಿಸಿಕೊಂಡು ಹೂ ಮುಡಿಸಿದೆ. ತುಟಿಯಲ್ಲಿ ಅದೇ ಮಂದಹಾಸ, ಕಣ್ಣಿನಲ್ಲಿ ಅದೇ ವಾತ್ಸಲ್ಯ, ಮಲ್ಲಿಗೆ ಎಂದರೆ ಅವಳಿಗೆ ತುಂಬಾ ಪ್ರೀತಿ. ಅದರ ಕಂಪು ಸರಳತೆಗೆ ಮೆಚ್ಚುತ್ತಾಳೆ. ಕೊಂಡು ತಂದುದಲ್ಲ, ಎದುರು ಮನೆಯ ರಾಧ ಕೈತೋಟದಲ್ಲಿ ನೀರು ಹಾಕಿ ಬೆಳಸಿದ್ದನ್ನು ಕಿತ್ತು ವಿಜಯಳಿಗೆ ಕೊಟ್ಟದ್ದು. ಸುಧೆಯನ್ನು ಎಷ್ಟು ನೋಡುತ್ತಿದ್ದರೂ ತೃಪ್ತಿಯೇ ಇಲ್ಲ. ಎಷ್ಟು ಮಾತನಾಡಿದರೂ ಗಂಟಲು|ನೋಯುವುದೇ ಇಲ್ಲ.

"ಬಂದಮೇಲೆ ನನ್ನ ಕತೆ ಬರೆಯಬೇಕು?"

ನಕ್ಕು ಹೇಳಿದೆ. ಹುಟ್ಟುವ ಆ ಪುಟಾಣಿಯ ಮೇಲೂ ಬರೆಯುತ್ತೇನೆ

ಬೆಚ್ಚಿಬಿದ್ದೆ, ಸುಧಾಳ ಕಣ್ಣಿನಲ್ಲಿ ನೀರು. ಅತ್ತದ್ದು ನಾನಲ್ಲ, ಅವಳು. ನನ್ನ ಹೃದಯದೊಳಗಿನ ಅವಳ ಹೃದಯ. ಮೃದುವಾಗಿ ಒರೆಸಿದೆ. ನೊಂದುಕೊಂಡಾಳು. ಬರೆದು ಬಿಡಬೇಕು ನನ್ನ ಸುಧಾಳ ಮೇಲೆ ಕತೆ ಬರೆದುಬಿಡಬೇಕು ಹೇಗೆ ಬರೆಯಲಿ?

"ಮಲ್ಲಿಗೆ!" ರಾಧೆ ದಂಡೆ ಕಟ್ಟಿಕೊಟ್ಟಿದ್ದಾಳೆ. ಅಕ್ಕನಿಗೆ ಮುಡಿಸಿ ಕೈಮುಗಿದೆ.

"ಬಂದಮೇಲೆ ನನ್ನ ಕತೆ ಬರೆಯಬೇಕು."

"ಸುಧಾ ಮೆಲ್ಲನೆ ಕೇಳುತ್ತಿದ್ದಾಳೆ. ಯಾಕಣ್ಣ ಅಳ್ತೀಯ? ಕಾಗದ ತಗೋ ಕತೆ ಬರಿ ನನ್ನ ಮದ್ದು ವಿಜಯ ನಾನು ಕೊಟ್ಟ ಕಾಗದದಲ್ಲಿ

ಪುಸ್ತಕ ಹೊಲಸಿಕೊಂಡಿಲ್ಲ' ಮೇಜಿನ ಮೇಲಿದ್ದ, ಲೇಖನಿಯನ್ನು ಕೈಗೆ ಕೊಟ್ಟಳು. ಕೊನೆಯದಾಗಿ ಬರೆದುಬಿಡಬೇಕು ; ಜನ್ಮಜನ್ಮಾಂತರಗಳಲ್ಲೂ ಅಳಿಯದಂತೆ ಹೃದಯದ ಮೇಲೆ ಉಚ್ಚೊತ್ತಿರುವ ಸುಧೆಯ ಕತೆ ಬರೆದುಬಿಡಬೇಕು. ಅಲ್ಲ, ನನ್ನ ಗೋಳಿನ ಕತೆಯನ್ನು ತೋಡಿಕೊಳ್ಳಬೇಕು. ಬರೆಯತೊಡಗಿದೆ.... ನಾನಿನ್ನು ಬರೆಯಲಾರೆ.

# ನಮ್ಮ ಪ್ರಕಟಣೆಗಳು

| | | |
|---|---|---|
| ಕನಸು ನನಸು | .... ಎಂ. ಕೆ. ಜಯಲಕ್ಷ್ಮಿ | .... ೨-೦೦ |
| ಒಂದೇ ಹಾಡು ಎರಡು ರಾಗ | .... ಯಂ. ಜಿ. ಭೀಮರಾವ್ | .... ೨-೫೦ |
| ಮಹಾಯುದ್ಧ | .... ಬೀchi | .... ೨-೨೫ |
| ರುಕ್ಮಿಣಿ | .... ಮಾವಿನಕೆರೆ ರಂಗನಾಥ್ | .... ೨-೦೦ |
| ಕಳ್ಳರ ಸಂತೆ | .... ಎ. ಎಸ್. ಮೂರ್ತಿ | .... ೨-೨೫ |
| ಕನಸಿನ ಕಡೆ | .... ಎಂ. ಕೆ. ಜಯಲಕ್ಷ್ಮಿ | .... ೩-೦೦ |
| ಪಥವಿಹೀನೆ | .... ಯಂ. ಜಿ. ಭೀಮರಾವ್ | .... ೨-೫೦ |
| ಕಂಬನಿಯ ಮಾಲೆ | .... ಮಾ. ಭೀ. ಶೇಷಗಿರಿರಾವ್ | .... ೨-೨೫ |
| ಸೂಳೆಯ ಮಗಳು | .... ಎಲ್. ರಾಮನ್ | .... ೨-೦೦ |
| ಸ್ವಪ್ನ ಸೌಧ | .... ಪಾನ್ಯಂ ಶಂಕರಮೂರ್ತಿ | .... ೨-೦೦ |
| ಮಂಗಳವಾದ್ಯ ಮೊಳಗಿತು | .... ಎಂ. ಕೆ. ಜಯಲಕ್ಷ್ಮಿ | .... ೨-೫೦ |
| ಹರಿಯಳಾದೇವಿ | .... ತ. ಪು. ವೆಂಕಟರಾಮ್ | .... ೨-೨೫ |
| ನೆನೆಸಿದ್ದೇ ಬೇರೆ | .... ಮ. ರಾಮಮೂರ್ತಿ | .... ೨-೫೦ |
| ಹೊಸಬಾಳಿನ ಹೊಸ ಹಾದಿ | .... ಯಂ. ಜಿ. ಭೀಮರಾವ್ | .... ೨-೨೫ |
| ಮಳಸಮ್ಮನ ಸಂಸಾರ | .... ನಾಡಿಗೇರ ಕೃಷ್ಣರಾಯ | .... ೨-೨೫ |
| ಮುಡಿಯೇರಿದ ಹೂ | .... ಉಷಾದೇವಿ | .... ೨-೫೦ |
| ಸಮರ ಕೋಲಾಹಲ | .... ಎಂ. ಕೆ. ಜಯಲಕ್ಷ್ಮಿ | .... ೨-೨೫ |
| ಬಾಳ ಬೆಳಕು | .... ಶಾರದೆ | .... ೨-೨೫ |
| ಮದನಿಕೆ | ತ. ಪು. ವೆಂಕಟರಾಮ್ | .... ೨-೫೦ |
| ಆರು ಏಳು ಸ್ತ್ರೀ ಸೌಖ್ಯ | .... ಬೀchi | ೨-೨೫ |
| ಬ್ರಹ್ಮಚಾರಿಯ ಮಗ | .... ಬೀchi | ೨-೨೫ |

**ಹೇಮಂತ ಸಾಹಿತ್ಯ**

**ಭಾಷ್ಯಂ ರಸ್ತೆ, ಬೆಂಗಳೂರು-೨**

## ನಮ್ಮ ಕಥೆಗಾರರನ್ನು ಕುರಿತು ನಾಡಿನ ಖ್ಯಾತರು ಹೀಗೆನ್ನುತ್ತಾರೆ :

"ಕನ್ನಡದಲ್ಲಿ ಇಂದು ಬರೆಯುವವರು ಬಹಳವಾಗಿದ್ದಾರೆ. ಆದರೆ ಬರೆಯಲು 'ಬಲ್ಲವರು' ವಿರಳ. ಈ ವಿರಳ ವರ್ಗಕ್ಕೆ ಸೇರಿದವರೊಬ್ಬರು ಗೆಳೆಯ ಮಾವಿನಕೆರೆ ರಂಗನಾಥನ್. ಪ್ರೌಢ ರೀತಿಯ ಕಥೆಗಾರಿಕೆಗೆ ಹೆಸರಾದವರು. ಅವರ ಕಥೆಗಳ ಸಂಗ್ರಹವನ್ನು ಓದಿ, ಸುತ್ತಿ ಸೌಂದರ್ಯಾನುಭವ ಮಾಡಲು ಎಲ್ಲರೂ ಪ್ರಯತ್ನ ಮಾಡುವರೆಂದು ನಂಬಿದ್ದೇನೆ. ರಂಗನಾಥನ್‌ರವರು ಹೀಗೆಯೇ ತಮ್ಮ ಸಾಹಿತ್ಯ ವ್ಯವಸಾಯವನ್ನು ಮುಂದುವರೆಸಿ, ನಾಡಿಗೆ ಸತ್ಫಲಗಳನ್ನು ರಸತ್ಫಲಗಳನ್ನು ಕೊಡಲೆಂದು ಹಾರೈಸುತ್ತೇನೆ"

**—ತಿರುಮಲೆ ತಾತಾಚಾರ್ಯ ಶರ್ಮ**

"ಮಾವಿನಕೆರೆ ರಂಗನಾಥನ್ ಅವರ ಚೊಚ್ಚಲ ಕೃತಿ ಇದು. ಉದಯೋನ್ಮುಖ ಬರಹಗಾರರಲ್ಲಿ ಬಹು ಪ್ರಮುಖರು. ಈಗಾಗಲೇ ಅವರ ಕತೆಗಳು ನಾಡಿನ ಹೆಸರಾಂತ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ಓದುಗರಿಂದ ಸೈ ಅನ್ನಿಸಿಕೊಂಡಿವೆ. 'ಮಲ್ಲಿಗೆ'ಯಲ್ಲಿ ಇವರ ಕತೆಗಳನ್ನು ಮೆಚ್ಚಿ ಪ್ರಕಟಿಸಿದ್ದೇನೆ. ಕತೆಗಾರಿಕೆಯಲ್ಲಿ ಹೊಸ ಜಾಡನ್ನು ಹುಡುಕಬೇಕು, ಹೊಸದಾರಿ ತುಳಿಯಬೇಕು ಎನ್ನುವ ಹಂಬಲವೂ ಇದೆ. ಅದಕ್ಕೆ ಈ 'ರುಕ್ಮಿಣಿ' ಕಥಾಸಂಕಲನವೇ ಸಾಕ್ಷಿ."

**—ನಾಡಿಗೇರ ಕೃಷ್ಣರಾಯ**

"ಮಾವಿನಕೆರೆ ಅವರು ಚಿಕ್ಕ ವಯಸ್ಸಿನ ಪದವೀಧರರು. ಈ ವಯಸ್ಸಿಗೆ ಲೇಖನ ಹಾಗೂ ಪ್ರಕಾಶನದ ಕ್ಷೇತ್ರವನ್ನು ಆರಿಸಿಕೊಂಡಿದ್ದಾರೆ. ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಅಭಿರುಚಿಯಿರುವ ಇವರು, ಇದುವರೆಗೂ ಮಾಡಿದ್ದು ಸ್ವಲ್ಪ; ಮಾಡಬೇಕಾದುದು ಬಹಳ ಎನ್ನುವ ಅಪರೂಪ ಮನೋಭಾವದವರು. ಪುರೋಗಾಮಿ ಸಾಹಿತ್ಯ ಸಂಘದ ಪ್ರಕಾಶನದಲ್ಲಿ ನಾಲ್ಕಾರು ಕೃತಿಗಳನ್ನು ಪ್ರಕಟಿಸಿದ್ದಾರೆ. ಹಲವಾರು ಸಂಕಲನಗಳ ಸಂಪಾದಕತ್ವ ಇವರ ಪಾಲಿಗಿದೆ."

**'ವಿಕ್ರಮ'**

**ಹೇಮಂತ ಸಾಹಿತ್ಯ**

ಭಾಷ್ಯಂರಸ್ತೆ – ಬೆಂಗಳೂರು–2